# ಭಾರತ ಸಾಧ್ವೀಮಣಿಮಂಜರಿ

( ರಾಜಪುತ್ರ ರಮಣಿಯರು )



ಎಸ್. ವರದರಾಜಯ್ಯಂಗಾರ್ಯರ ಅನುಮತಿಯಿಂದ ಬೆಂಗಳೂರು

ಸಿಟಿ ಮುದ್ರಾಲಯದಲ್ಲಿ ಮುದ್ರಿಸಿ ಪ್ರಕಾಶಪಡಿಸಲ್ಪಟ್ಟಿತು.



**Price 10 As.]** [ಬೆಲೆ ೧೦ ಆಣೆ.

# ವಿ ಷ ಯ ಸೂ ಚಿ ।







# ಪ್ರ ಸ್ತಾ ವ ನಾ .

ವಿದ್ಯಾವತಿಯರಾದ ಸ್ತ್ರೀಯರಿಗೆ ಓದಲಿಕ್ಕೆ ಅನುಕೂಲಿಸುವಂತೆ ಆಂಧ್ರಭಾಷೆಯಲ್ಲಿ ರಚಿತವಾಗಿರುವ "ಅಬಲಾಜರಿತ್ರರತ್ನಮಾಲೆ" ಯನ್ನು ಕನ್ನಡಿಸಿ ಭಾಷಾಸೇವೆಯನ್ನು ಮಾಡಬಹುದೆಂದು ನನ್ನ ಮಕ್ಕಳಾದ ಸೌಭಾಗ್ಯವತಿ ಅಚ್ಚಮ್ಮನಿಗೂ ಸೌಭಾಗ್ಯವತಿ ರಾಜಮ್ಮನಿಗೂ ಹೇಳಿದೆನು. ಅವರಿಗೆ ಆಂಧ್ರಭಾಷೆಯಲ್ಲಿ ಹೆಚ್ಚು ಪರಿಶ್ರಮವಿಲ್ಲದಿದ್ದರೂ ಈ ಕಾರ್ಯಕ್ಕೆ ಒಪ್ಪಿ ಯಥಾಮತಿ ಭಾಷಾಂತರಮಾಡಿಕೊಟ್ಟರು. ಅದನ್ನು ಬೇರೆಬೇರೇ ಭಾಗಗಳನ್ನಾಗಿ ವಿಂಗಡಿಸಲಾಯಿತು. ಮೊದಲನೆಯ ಭಾಗದಲ್ಲಿ ನಾಲ್ವರು ಮಹಾರಾಣಿಯರ ಚರಿತ್ರೆಗಳೂ ಎರಡನೆಯ ಭಾಗದಲ್ಲಿ ೧೧ ಚರಿತ್ರೆಗಳೂ ಅಡಕವಾದವು. ಎರಡನೇಭಾಗದ ದ್ವಿತೀಯ ಮುದ್ರಣದಲ್ಲಿ ೧೨ ಚರಿತ್ರೆಗಳನ್ನು ಪ್ರಕಟಿಸಲಾಯಿತು. ಈ ದ್ವಿತೀಯ ಮುದ್ರಣವನ್ನು ಮದರಾಸು ಗೌರ್ನಮೆಂಟಿನ ೧೯೨೪ನೆ ಇಸವಿ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ "ಟೆಕ್ಸ್ಟಾಗಿ" (Text) ಇಟ್ಟಿರುವರು.

ಈ III ನೇ ಭಾಗದಲ್ಲಿ ಸದರಿ ದ್ವಿತೀಯಮುದ್ರಣದ ಪ್ರಥಮ ಆರು ಕಥೆಗಳೊಂದಿಗೆ "ಮಹಾವೀರಾ ಶೂರಾಗ್ರೇಸರಿಣೀ" ಎಂದು ಹಿಂದೂ

ಇಂಗ್ಲಿಷ್ ಚರಿತ್ರೆಗಳಲ್ಲಿ ಮಹಾ ಪ್ರಸಿದ್ಧಳಾಗ ಬ್ರಾಹ್ಮಣೀ ಲಕ್ಷ್ಮೀ ಬಾಯಿಯ ಅದ್ಭುತಚರಿತ್ರೆಯೂ ಸೇರಿಸಲ್ಪಟ್ಟಿದೆ.

S. VARADA RAJA IYENGAR,
*Retired Sub-Judge,*

**ವರದನಿವಾಸ,**
**ಚಾಮರಾಜಪೇಟೆ,**
**ಬೆಂಗಳೂರು ಸಿಟಿ.**
***2nd March 1924.***

ಶ್ರೀ

# ಭಾರತ ಸಾಧ್ವೀಮಣಿಮಂಜರಿ.

---

## ದ್ವಿತೀಯಭಾಗ.

---

## ರಾಜಪುತ್ರ ಮಣಿಯರು

ಶ್ರೀ ವಲ್ಲಭೇತಿ ವರದೇತಿ ದಯಾಪರೇತಿ ।
ಭಕ್ತಪ್ರಿಯೇತಿ ಭವಲುಂಠನಕೋವಿದೇತಿ ॥
ನಾಥೇತಿ ನಾಗಶಯನೇತಿ ಜಗನ್ನಿವಾಸೇ
ತ್ಯಾಲಾಪನಂ ಪ್ರತಿಪದಂ ಕುರುಮೇಮುಕುಂದ ॥

### ೧. ರಾಣಿ ರಾಮಾಬಾಯಿ.

ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ ।
ಲೋಕೋತ್ತರಾಣಾಂಚೇತಾಂಸಿ, ಕೋಹಿ ವಿಜ್ಞಾತುಮರ್ಹತಿ॥

—o—

ಈ ಅಸಮಾನಸಾಹಸವನ್ನುಳ್ಳ ಶೂರನಾರೀ ರತ್ನವು ರಾಜಪುತ್ರಸ್ಥಾನದಲ್ಲಿ, ಚಿತ್ತೂರು ಸಂಸ್ಥಾನಾಧೀಶ್ವರನಾದ ಜಗಮಲ್ ಮಹಾರಾಜನ ಧರ್ಮಪತ್ನಿಯು. ಡಿಲ್ಲಿ ಚಕ್ರವರ್ತಿಗಳಲ್ಲಿ ಉತ್ತಮೋತ್ತಮನೆಂದು ಕೀರ್ತಿಯನ್ನು ಹೊಂದಿದ ಅಕ್ಬರ್ ಬಾದುಷಾವಿಗೆ ಜಗಮಲ್ ಮಹಾರಾಜನು ಸಮಾನಕಕ್ಷಿಯಾದವನು. ರಾಮಾಬಾಯಿಯು ತನ್ನ ಬುದ್ಧಿಪ್ರಭಾವದಿಂದ ಪತಿಯಮೇಲೆ ಬಂದಂಥ ಸಂಕಟಗಳನ್ನು ಅನೇಕ ವೇಳೆಗ

ಳಲ್ಲಿ ತಪ್ಪಿಸಿದಳು. ಆದ್ದರಿಂದ ಅಂದಿನಿಂದಲೂ ಮಹಾರಾಜನು ಭಾರ್ಯೆಯ ಅನುಮತಿಯಿಲ್ಲದೆ ಯಾವಕಾರ್ಯವನ್ನಾದರೂ ಮಾಡುತ್ತಿರಲಿಲ್ಲ. ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿದಾಗ ಅಕ್ಬರ್ ಬಾದುಷಾ ಈ ಚಿತ್ತೂರು ರಾಜ್ಯದಮೇಲೆ ದಂಡೆತ್ತಿ ಬಂದು "ನೀನು ನನಗೆ ಸಾಮಂತನಾಗಿದ್ದುಕೊಂಡು ನನಗೆ ವರ್ಷಂಪ್ರತಿ ಸ್ವಲ್ಪ ಸಿಸ್ತನ್ನು ಸಲ್ಲಿಸುವುದಕ್ಕೆ ಒಪ್ಪಿಕೊಳ್ಳುವುದು. ಇಲ್ಲದಿದ್ದಪಕ್ಷದಲ್ಲಿ ಯುದ್ಧಕ್ಕೆ ಬರಬೇಕಾಗುವುದು," ಎಂದು ಜಗಮಲ್ ಮಹಾರಾಜನಿಗೆ ವರ್ತಮಾನವನ್ನು ಕಳುಹಿಸಿದನು. ತರುವಾಯ ಜಗಮಲ್ಲನು "ನಮ್ಮ ದೇಹದಲ್ಲಿ ಪ್ರಾಣಗಳು ಇರುವವರೆಗೂ ನಾವು ನಿಮಗೆ ಶರಣು ಹೊಂದಿ ನಿಮ್ಮ ಸಾಮಂತರಾಗುವುದಿಲ್ಲ. ನಿಮ್ಮೊಡನೆ ಯುದ್ಧವನ್ನೇ ಮಾಡುವೆವು;" ಎಂದು ಡಿಲ್ಲಿ ವಲ್ಲಭನಿಗೆ ವರ್ತಮಾನವನ್ನು ಹೇಳಿ ಕಳುಹಿಸಿ, ಕೋಟೆಯ ದ್ವಾರಗಳನ್ನೆಲ್ಲಾ ಮುಚ್ಚಿಸಿ, ಸೈನ್ಯ ಸಮೇತನಾಗಿ ಬುರುಜುಗಳ ಮೇಲೆ ಹತ್ತಿ, ಶತ್ರುಗಳ ಸಂಗಡ ಯುದ್ಧ ಮಾಡಲಾರಂಭಿಸಿದನು. ಆದರೆ ಪ್ರತಿ ಕಕ್ಷಿಗಳಾದ ತುರುಕರು ಅಧಿಕರಿದ್ದುದರಿಂದ ಕ್ಷತ್ರಿಯರ ಧೈರ್ಯವು ಅಷ್ಟಷ್ಟಕ್ಕೆ ಕಡಮೆಯಾಗುತ್ತಾ ಬಂತು. ಒಂದುದಿನ ಜಗಮಲ್ ಮಹಾರಾಜರವರು ಒಂದು ಬುರುಜಿನ ಮೇಲಿನಿಂದ ಶತ್ರುಗಳ ಸಂಖ್ಯೆಯನ್ನೂ, ಅಸಮಾನ ಶೌರ್ಯವನ್ನೂ ನೋಡಿ ತಾವು ಶತ್ರುಗಳಿಂದ ಹತರಾಗಿ ತಮ್ಮ ಸ್ತ್ರೀಯರೆಲ್ಲರೂ ಅಗ್ನಿಯಲ್ಲಿ ಪ್ರವೇಶಿಸುವ ಸಮಯವು ಹತ್ತಿರಕ್ಕೆ ಬಂತೆಂದು ತಿಳಿದು ತುಂಬಾ ಚಿಂತಾಕ್ರಾಂತರಾದರು. ಆಗ ರಾಮಾಬಾಯಿಯು ಸೈನ್ಯದ ಭಟರ

ಗಳನ್ನು ಪ್ರೋತ್ಸಾಹಪಡಿಸುತ್ತಾ, ಅತ್ತಿತ್ತ ತಿರುಗಾಡುತ್ತಾ ಇದ್ದುದರಿಂದ ಆಕೆಯು ತನ್ನ ಪತಿಯ ದೈನ್ಯವನ್ನು ನೋಡಿ ಅತ್ಯಂತ ದುಃಖಿತಳಾಗಿ, ಸಂಕಟವನ್ನು ತಪ್ಪಿಸುವುದಕ್ಕಾಗಿ ಒಂದು ಉಪಾಯವನ್ನು ಯೋಚಿಸಿ, ಪತಿಯೊಡನೆ "ನಾನು ಬೇರೆ ವೇಷದಿಂದ ಶತ್ರುಸೈನ್ಯದೊಳಕ್ಕೆ ಹೋಗಿ ನಮ್ಮ ಮುಖ್ಯ ಶತ್ರುವಾದ ಅಕ್ಬರನನ್ನು ಕೊಂದು ಬರುವೆನು; ನಮ್ಮ ರಾಜ್ಯವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಇದಕ್ಕಿಂತ ಬೇರೆ ಉಪಾಯವು ಇಲ್ಲ" ಎಂದಳು. ಈ ಮಾತುಗಳನ್ನು ಕೇಳಿ ರಾಜನು ತನ್ನ ಭಾರ್ಯೆಯ ಸಾಹಸಕ್ಕೆ ಅತ್ಯಂತ ಆಶ್ಚರ್ಯಪಟ್ಟು, 'ಇಂಥಾ ದೊಡ್ಡ ಕೆಲಸವು ನಿನ್ನಿಂದ ಆಗಲಾರದು' ಎಂದು ಪ್ರತ್ಯುತ್ತರವನ್ನು ಕೊಟ್ಟನು. ಈ ಮಾತುಗಳನ್ನು ಕೇಳಿ ರಾಮಾಬಾಯಿಯು ಹೀಗೆಂದಳು.-"ಅದನ್ನು ಕುರಿತು ನೀವು ಸಂಶಯಪಡುವ ಅಗತ್ಯವಿಲ್ಲ. ಆ ಭಾರವೆಲ್ಲವನ್ನೂ ಈಶ್ವರನ ಮೇಲೂ, ನನ್ನ ಮೇಲೂ ಹಾಕಿ ನನಗೆ ಅಪ್ಪಣೆಯನ್ನು ಕೊಡಿ.' ಪತಿಯಾಜ್ಞೆಯಿಂದ ಪತ್ನಿಯು ಎಷ್ಟು ದೊಡ್ಡ ಕೆಲಸವಾದರೂ ಮಾಡಬಲ್ಲಳು." ಹೀಗೆ ಹೆಂಡತಿಯಿಂದ ಧೈರ್ಯವಾಗಿ ಬೇಡಲ್ಪಟ್ಟ ಜಗಮಲ್ ಮಹಾರಾಜನು ಸ್ವಲ್ಪಹೊತ್ತು ಯೋಚಿಸಿ ಹೀಗಂದನು:- "ನಿನ್ನ ಸುಕುಮಾರಹಸ್ತದಿಂದ ಕಠಿನಹೃದಯರಾದ ಶತ್ರುಗಳ ಹೃದಯಭೇದವನ್ನು ಮಾಡಬಲ್ಲೆನೆಂದು ನಿನಗೆ ಧೈರ್ಯವುಂಟಾಗಿದ್ದ ಪಕ್ಷದಲ್ಲಿ ನಿನ್ನ ಇಷ್ಟಪ್ರಕಾರವಾಗಿಯೇ ಮಾಡಬಹುದು. ಆದರೆ ಸಂಗಡ ಒಂದು ಚಿಕ್ಕ ಕತ್ತಿಯನ್ನು ಇಟ್ಟುಕೊಂಡಿರು. ಯಾವಾಗಲಾದರೂ ಮಾನಭಂಗವಾಗುವಂಥ ಪ್ರಸಂಗ ಬಂದ

ಪಕ್ಷದಲ್ಲಿ, ರಾಜಸ್ತ್ರೀಯರಿಗೆ ಯೋಗ್ಯವಾದ ಆತ್ಮಹತ್ಯೆ ಮಾಡಿ ಕೊಂಡು ಮಾನವನ್ನು ರಕ್ಷಿಸಿಕೊಳ್ಳುವುದು''. ಪತಿಯಅನು ಜ್ಞೆದೊರಕಿದ ಒಡನೆಯೇ ರಾಮಾಬಾಯಿಯು ಅತ್ಯಂತ ಪ್ರಮು ದಿತಹೃದಯಳಾಗಿ, ತನ್ನ ವೇಷವನ್ನು ಬದಲಾಯಿಸಿ ಕಾವೀವ ಸ್ತ್ರಗಳನ್ನು ಧರಿಸಿ, ಜಟಾಧಾರಿಯಾಗಿ ದೊಡ್ಡ ದೊಡ್ಡ ಮಣಿಗಳ ಸರವನ್ನು ಹಾಕಿಕೊಂಡು, ಫಕೀರುವೇಷ (ತುರುಕಬೈರಾಗಿಯ ವೇಷ)ವನ್ನು ಧರಿಸಿ, ಚಿಕ್ಕ ಖಡ್ಗ ಒಂದನ್ನು ಗುಪ್ತವಾಗಿ ಬಚ್ಚಿ ಟ್ಟುಕೊಂಡು, ಪಿಟೀಲು ಒಂದನ್ನು ಸಂಗಡ ತೆಗೆದುಕೊಂಡು, ಯಾರಿಗೂ ತಿಳಿಯದಹಾಗೆ ಕೋಟೆಯಿಂದ ಹೊರಟು, ಶತ್ರುಸೈ ನ್ಯದೊಳಕ್ಕೆ ಹೋದಳು. ಅಲ್ಲಿನ ಸಂರಕ್ಷಕಭಟರ ಸಂಗಡ ಆಕೆಯು ''ನಾನು ಬಾದುಷಾವನ್ನು ನೋಡಿ ಆಶೀರ್ವದಿಸ ಬಲ್ಲೆನು. ನನ್ನನ್ನು ಆತನ ಹತ್ತಿರಕ್ಕೆಕರೆದುಕೊಂಡುಹೋಗಿರಿ, ಎಂದು ಹೇಳಿದಳು. ಆಕೆಯ ಮೃದುವಚನಗಳನ್ನು ಕೇಳಿ, ಆಕೆ ಯಾರೋ ಒಬ್ಬ ದೊಡ್ಡ ಫಕೀರನು ಇಲ್ಲಿಗೆ ಬಂದಿರುವ ನೆಂದು ತಿಳಿದು, ಆಕೆಯನ್ನು ಬಾದುಷಾವಿನ ಹತ್ತಿರಕ್ಕೆ ಕರೆದು ಕೊಂಡು ಹೋದರು. ಅಲ್ಲಿಗೆ ಹೋಗಿ ಚಕ್ರವರ್ತಿಗೆ, ತುರುಕ ರಿಗೆ, ಯೋಗ್ಯವಾದ ರೀತಿಯಲ್ಲಿ ಮರ್ಯಾದೆಗಳನ್ನು ಮಾಡಿ ಆಶೀರ್ವಚನಗಳನ್ನು ಹೇಳಿದಳು. ಆಕೆಯ ಮುಖಲಕ್ಷಣ ಗಳನ್ನು ನಿರೀಕ್ಷಿಸಿ ನೋಡಿ, ಅಕ್ಬರು 'ನೀನು ಯಾವ ಇಚ್ಛೆ ಯಿಂದ ಇಲ್ಲಿಗೆ ಬಂದೆ?"ಯೆಂದು ಕೇಳಿದನು. «ಹಿಂದೂದೇಶದ ಚಕ್ರವರ್ತಿಗಳಾದ ನಿಮ್ಮನ್ನು ಆಶೀರ್ವದಿಸಿ ಈಶ್ವರಭಜನೆ ಇಂದ ಮೆಚ್ಚಿಸಿ, ಬಹುಮತಿಯನ್ನು ಪಡೆಯಬಂದೆನು."

ಎಂದು, ಆ ಮಾಯೆಯ ಬೈರಾಗಿಯು ಹೇಳಿದಳು. ಹೀಗೆ ಹೇಳಿ ಆಕೆಯು ಪಿಟೀಲನ್ನು ನುಡಿಸುತ್ತಾ ಅದಕ್ಕೆ ಅನುಕೂಲವಾಗಿ ಆಲೋಚನೆಯನ್ನು ಮಾಡಿ ಒಂದು ಹಿಂದೂಸ್ಥಾನೀಕೀರ್ತನೆ ಯನ್ನು ಹಾಡಲು, ಅತಿಮಧುರವಾದ ಆಕೆಯ ಕಂಠಸ್ವರವನ್ನು ಕೇಳಿ ಬಾದುಷಾ ಪರವಶನಾದನು. ಹೀಗೆ ಅಕ್ಬರನು ತಲ್ಲೀನ ನಾಗಿ ಕಣ್ಣುಗಳನ್ನು ಮುಚ್ಚಿಕೊಂಡು ಕೈಗಳಿಂದ ಹಾಡಿಗೆ ತಕ್ಕಂತೆ ತಾಳಗಳನ್ನು ಹಾಕುವುದನ್ನುನೋಡಿ, ಆ ಯೋಗಿಯು ಮೆಲ್ಲಗೆ ಕತ್ತಿತೆಗದು ಬಾದೂಷಾರವರ ಕಂಠವನ್ನು ಕತ್ತ ರಿಸಲು ಯತ್ನಿಸಿದಳು. ಇಷ್ಟರಲ್ಲಿ ಗಾನವು ಪೂರೈಸಿದು ದರಿಂದ ಬಾದುಷಾ ಕಣ್ಣು ತೆರೆದು ಖಡ್ಗಪಾಣಿಯಾದ ಯೋಗಿಯನ್ನು ನೋಡಿ, ಆಕೆಯು ಮಾಡಬೇಕೆಂದಿದ್ದ ಕೆಲ ಸವನ್ನು ತಿಳಿದು, ಯುಕ್ತಿಯಿಂದ ಆಕೆಯ ಕೈಕತ್ತಿಯನ್ನು ಸೆಳೆದುಕೊಂಡನು. ಹೀಗೆ ತನ್ನ ಮನೋರಥವು ವಿಫಲವಾ ಗಲು ರಾಮಾಬಾಯಿಯು ಏನೂ ತೋರದೆ ದಿಗ್ಭ್ರಮೆಯನ್ನು ಹೊಂದಿ ನಿಂತುಕೊಂಡಳು. ಆಗ ಅಕ್ಬರನು 'ನಿನ್ನ ಗಾನಕ್ಕೆ ಮೆಚ್ಚಿದೆನು. ನಿನಗೆ ಏನುಬೇಕೋ ಕೇಳು. ನಿನ್ನ ಅಪರಾಧ ವನ್ನು ಕ್ಷಮಿಸಿದೆನು" ಎಂದು ಹೇಳಿದನು. ಆ ಮಾತುಗಳನ್ನು ಕೇಳಿ ರಾಮಾಬಾಯಿಯು ತನ್ನ ವೃತ್ತಾಂತವೆಲ್ಲವನ್ನೂ ಬಾದು ಷಾವಿಗೆ ತಿಳಿಸಿ, 'ಪ್ರಾಣದ ಮೇಲೆ ಆಶೆಪಡದೆ ನಾನು ಇಲ್ಲಿಗೆ ಬಂದಿದ್ದೇನೆ. ನನ್ನ ಉದ್ದೇಶ್ಯವು ಫಲಿಸಲಿಲ್ಲ. ಆದ್ದರಿಂದ ನಾನು ಮರಳಿ ನಮ್ಮ ಸೈನ್ಯದೊಳಕ್ಕೆ ಹೋಗುವುದಿಲ್ಲ. ಯಾರ ಕೈಯಿಂದಲಾದರೂ ನನ್ನ ಶಿರಸ್ಸನ್ನು ತೆಗೆಯಿಸಿಬಿಡಿ. ಇದೇ

ನನ್ನ ಕೋರಿಕೆ' ಎಂದು ಹೇಳಿದಳು. ಇಂಥ ಪ್ರಗಲ್ಭವಚನ ಗಳಿಗೆ ಆಶ್ಚರ್ಯಪಟ್ಟು ಉದಾರನಾದ ಢಿಲ್ಲೀಶ್ವರನು ಹೀಗೆಂದನು:- "ನೀನುಪತಿಕೋಸ್ಕರ ಬಂದಿದ್ದರೂ ಶೂರರಾದ ನಮ್ಮ ಭಟರು ಒಬ್ಬ ಅಬಲೆಯ ಮೇಲೆ ತಮ್ಮ ಶಸ್ತ್ರನಿಪುಣತೆಯನ್ನು ತೋರಿ ಸರು. ನಾನು ಇಲ್ಲಿ ಸ್ತ್ರೀಯರ ಸಂಗಡ ಯುದ್ಧ ಮಾಡುವುದ ಕ್ಕಾಗಿ ಬರಲಿಲ್ಲ." ಹೀಗೆ ಹೇಳಿ, ಆ ಅಸಮಾನನಾದ ಬಾದುಷಾ ತನ್ನ ಮುಖ್ಯಸೇವಕರನ್ನು ಸಂಗಡ ಕಳುಹಿಸಿ ರಾಮಾಬಾ ಯಿಯನ್ನು ಜಗಮಲ್ಲನ ಹತ್ತಿರಕ್ಕೆ ಕಳುಹಿಸಿಬಿಟ್ಟನು. ಹೀಗೆ ಭಗ್ನಮನೋರಥಳಾಗಿ ಪುನಃ ಬಂದಮೇಲೆಯೂ ಕೂಡ ರಾಮಾಬಾಯಿಯು ಧೈರ್ಯವನ್ನು ಬಿಡದೆ ಪತಿಯೊಡನೆ ಹೀಗೆಂ ದಳು. "ಪ್ರಾಣೇಶ್ವರಾ! ಈ ಹಗೆಗಳಿಂದ ನಾವೆಲ್ಲರೂ ಕೊಲ್ಲ ಲ್ಪಡುವ ಸಮಯವು ತಟಸ್ಥವಾಗಿರುವುದು. ಆದ್ದರಿಂದ ನಾವು ಪ್ರಾಣಾವಸಾನಪರ್ಯಂತವೂ ದೀನತ್ವವನ್ನು ಹೊಂದದೆ ವೈರಿ ಗಳೊಡನೆ ಹೋರಾಡಿ ಸ್ವರ್ಗಸುಖವನ್ನು ಅನುಭವಿಸೋಣ" ಹೀಗೆ, ಹಲವು ಬಗೆಗಳಿಂದ ಪತಿಗೆ ಧೈರ್ಯವನ್ನು ಹೇಳಿ ಯುದ್ಧ ವನ್ನು ನಡೆಸುತ್ತಿದ್ದಳು. ಒಂದುದಿನ ಅಕ್ಬರನು ಏಣಿಗಳನ್ನು ಹಾಕಿಕೊಂಡು ಬುರುಜುಗಳ ಮೇಲೆ ಹತ್ತಿಲಿಕ್ಕೆ ಯತ್ನಿಸು ತ್ತಿರಲು ಅವರನ್ನು ನಿವಾರಿಸಿ ಅನೇಕರನ್ನು ಕೆಳಕ್ಕೆ ಬೀಳಿಸಿ, ತನ್ನ ಸೈನ್ಯವನ್ನು ಪ್ರೋತ್ಸಾಹ ಪಡಿಸುತ್ತಾ, ತಟನ್ಮಾಲೆಗಳ ಹಾಗೆ ರಾಮಾಬಾಯಿಯೂ ಜಗಮಲ್ ಮಹಾರಾಜರವರೂ ತಿರುಗಾಡುತ್ತಾ ಇದ್ದರು. ಆಗ ತುರುಕರ ಸೈನ್ಯದಿಂದ ಬಂದ ಒಂದು ಬಾಣವು ತಗಲಿ ಜಗಮಲ್ ಮಹಾರಾಜನು ಗತಪ್ರಾಣ

ನಾದನು. ಅದನ್ನು ನೋಡಿ, ಕ್ಷತ್ರಿಯರೆಲ್ಲರೂ ತಮ್ಮ ಪ್ರಾಣ ಗಳಿಗೆ ಆಶೆಪಡದೆ ಕೋಟೆಯಿಂದ ಹೊರಟು ಬುರುಜುಗಳ ಮೇಲೆ ನಿಂತುಕೊಂಡು ಅಕ್ಬರನ ಸೈನ್ಯದ ಮೇಲೆ ಕೆಂಡ ಗಳನ್ನು ಸುರಿಸಲಾರಂಭಿಸಿದರು. ಇಷ್ಟರಲ್ಲಿ ಮ್ಲೇಚ್ಛ ಸೈನ್ಯ ದಲ್ಲೆಲ್ಲಾ ಮಹಾರಾಜನು ಸತ್ತಸಂಗತಿ ತಿಳಿದು ಅವರೆಲ್ಲರಿಗೂ ಸಂತೋಷವುಂಟಾಗಿ ಕೋಟೆಯೊಳಕ್ಕೆ ಯಾವಾಗ ಪ್ರವೇಶ ಮಾಡೋಣವೆಂದು ಯೋಚಿಸುತ್ತಿದ್ದರು. ಅಷ್ಟರಲ್ಲಿಯೇ ಒಂದು ದ್ವಾರದಿಂದ ಅನೇಕ ಕ್ಷತ್ರಿಯ ಸೈನ್ಯವು ಹೊರಟು ಬಾದುಷಾ ಸೈನ್ಯದ ಮೇಲೆ ಬಿದ್ದು ಹೋರಾಡಿತು. ಆಗ ಅವರ ಲಕ್ಷಣವನ್ನು ನೋಡಲಾಗಿ ಅವರು ಮರಳಿ ಒಳಕ್ಕೆ ಹೋಗು ವೆವೆಂಬ ಆಶೆಯನ್ನು ತೊರೆದು ಕಣ್ಣುಗಳಲ್ಲಿ ಬೆಂಕಿಯನ್ನು ಸುರಿಸುತ್ತಾ ವೀರಾವೇಶಪರವಶರಾಗಿ, ಹಗೆಗಳ ಮೇಲೆ ಹಾರಿ ಒಬ್ಬೊಬ್ಬರು ಹತ್ತುಮಂದಿ ಹಗೆಗಳ ಪ್ರಾಣವನ್ನಾದರೂ ತೆಗೆಯುತ್ತಿದ್ದರು. ಅವರ ರೌದ್ರಾಕಾರವನ್ನು ನೋಡಲಾಗಿ ತುರುಕರು ಆಗಲೇ ನಿಶ್ಶೇಷರಾಗುವರೆಂದು ತೋರಿತು. ಈ ಸೈನ್ಯದಲ್ಲಿ ಎಲ್ಲರಿಗಿಂತಲು ಮುಂದೆ ಪುರುಷ ವೇಷದಿಂದ ಅಸ ಮಾನರಣ ಪ್ರಯತ್ನವನ್ನು ತೋರಿಸುತ್ತಿದ್ದವಳು ಪತಿವಿರಹಿತ ಳಾದ ರಾಮಾಬಾಯಿಯೇ! ಪತಿಪ್ರಾಣಕ್ಕೆ ಬದಲಾಗಿ ಬಾದು ಷಾ ಪ್ರಾಣವನ್ನು ಬಲಿಕೊಡದೆ ಹೋದ ಪಕ್ಷದಲ್ಲಿ ತನ್ನ ಜನ್ಮವು ವ್ಯರ್ಥವೆಂದು ಯೋಚಿಸಿ, ತ್ರಿಪುರಮರ್ದಿನಿಯ ಅವತಾರವನ್ನು ಧರಿಸಿ, ಎದುರಿಗೆ ಬಂದವರೆಲ್ಲರನ್ನೂ ತನ್ನ ಖಡ್ಗಕ್ಕೆ ಬಲಿ ಕೊಡುತ್ತಾ, ಒಂದೊಂದು ಹೆಜ್ಜೆಯು ಮುಂದಕ್ಕೆ ತ್ವರೆಯಾಗಿ

ಹೋಗುತ್ತಾ, ಹೇಗಾದರೂ ಬಾದುಷಾವನ್ನು ಸಮೀಪಿಸಿ ಆತನ ಶಿರಸನ್ನು ತನ್ನ ಹಸ್ತದಖಡ್ಗದಿಂದ ಕತ್ತರಿಸಬೇಕೆಂದು ಯೋಚಿಸುತ್ತಿದ್ದಳು. ಆಕೆಯು ನಡುವೆ ಬಂದಂಥಾ ಪ್ರತಿಭಟರ ಆಯುಧಗಳಿಂದ ಶರೀರದ ಮೇಲೆ ಹೆಚ್ಚಾದ ಗಾಯಗಳಾದರೂ ತನ್ನ ಪ್ರಯತ್ನಗಳನ್ನುಬಿಡದೆ ರಾಜಮಂದಿರದ್ವಾರದವರೆಗೂ ಪ್ರವೇಶಿಸಿದಳು. ಅಲ್ಲಿಗೆ ಹೋಗುವ ವೇಳೆಗೆ ಈಕೆಯ ಬಲವು ಬಹಳ ತಗ್ಗಿದ್ದರಿಂದ ಅಲ್ಲಿನ ಭಟರು ಆಕೆಯನ್ನು ಹಿಡಿದುಕೊಂಡು ಅಕ್ಬರನ ಹತ್ತಿರಕ್ಕೆ ತೆಗೆದುಕೊಂಡು ಹೋದರು. ಆಕೆಯ ಸಾಹಸ ಧೈರ್ಯ ಶೌರ್ಯಾದಿಗಳನ್ನು ಕೇಳಿಯೂ, ನೋಡಿಯೂ ಬಾದುಷಾ ಅತ್ಯಂತ ಆಶ್ಚರ್ಯವನ್ನು ಹೊಂದಿ, ಇಂಥಾ ಶೂರನಾರೀರತ್ನವು ಸಿಕ್ಕುವುದು ದುರ್ಲಭವೆಂದು ತಿಳಿದು ಸಮೀಪವರ್ತಿಗಳಾದ ಪರಿಚಾರಕರನ್ನು ಕರೆದು, ಆಕೆಯ ಶರೀರದಲ್ಲಿರುವ ಗಾಯಗಳನ್ನು ತೊಳೆದು, ಔಷಧೋಪಚಾರಗಳನ್ನು ಮಾಡಿರೆಂದು ಆಜ್ಞಾಪಿಸಿದನು. ಹೀಗೆ ಅಲ್ಲಿ ಕೆಲವು ದಿನಗಳವರೆಗೂ ಉಪಚಾರ ಜರುಗಿದ ತರುವಾಯ ಆಕೆಯ ಗಾಯಗಳು ಬಹಳ ಮಟ್ಟಿಗೆ ಗುಣವಾಗಿ, ಆಕೆಗೆ ಬಲ ಉಂಟಾಯಿತು. ತರುವಾಯ ಆಕೆಯು ಒಂದು ದಿನ ಬಾದುಷಾವನ್ನು ನೋಡಬೇಕೆಂಬ ಇಚ್ಛೆಯನ್ನು ತಿಳಿಸಲಾಗಿ, ಆಕೆಯನ್ನು ಬಾದುಷಾವಿನ ಹತ್ತಿರಕ್ಕೆ ಕರೆದುಕೊಂಡು ಹೋದರು. ಆಗ ಆಕೆಯು ನಿರ್ಭಯವಾಗಿ ಬಾದುಷಾ ಸಂಗಡ ಹೀಗೆಂದಳು. "ನಾನು ಅನೇಕಾವರ್ತಿ ನಿನ್ನನ್ನು ಕೊಲ್ಲಲು ಪ್ರಯತ್ನಿಸಿದೆನು, ಆದರೆ ಈಶ್ವರೇಚ್ಛೆ ಬೇರೆಯಾಗಿದ್ದುದರಿಂದ ನನ್ನ ಪ್ರಯತ್ನಗಳೆಲ್ಲವೂ

ನಿರರ್ಥಕಗಳಾದವು. ನನ್ನ ಪ್ರಾಣವು ಇದ್ದ ಪಕ್ಷದಲ್ಲಿ ಎಂದಿಗಾ ದರೂ ನನ್ನ ಪತಿಯನ್ನ ಕೊಂದ ಹಗೆಯನ್ನು ಸಾಧಿಸದೆ ಹೋಗುವುದಿಲ್ಲ. ಆದರೆ ಈಗ ನಾನು ನಿನ್ನ ಕೈಗೆ ಸಿಕ್ಕಿದ್ದರಿಂದ ಈ ಸಲ ಕ್ಷಮೆಗೆ ಪಾತ್ರಗಳಾಗುವುದಿಲ್ಲ. ಪ್ರಾಣೇಶ್ವರನ ಸಮಿಾ ಪಕ್ಕೆ ಹೋಗಬೇಕೆಂಬ ಇಚ್ಛೆಯು ನನ್ನನ್ನು ತ್ವರೆಪಡಿಸುತ್ತ ಲಿರುವುದು. ಆದ್ದರಿಂದ ನೀವು ನಿಮ್ಮ ಸೇವಕರಲ್ಲಿ ಯಾರಿಗಾ ದರೂ ನನ್ನನ್ನು ಜಾಗ್ರತೆಯಾಗಿ ಯಮಸದನಕ್ಕೆ ಕಳುಹಿಸಲು ಅಪ್ಪಣೆಯನ್ನೀಯುವುದು''. ಇಂಥಾ ಧೀರೋದಾತ್ತ ವಚನ ಗಳನ್ನು ಕೇಳಿ ಅಕ್ಬರ್ ಬಾದುಷಾ ಸ್ವಲ್ಪಹೊತ್ತು ಚಿಂತಾ ಕ್ರಾಂತನಾಗಿ ಆಕೆಯೊಡನೆ ಹೀಗೆಂದನು.-"ಎಲೌ ಶೂರನಾರೀ ರತ್ನವೇ ! ಇಷ್ಟು ಪತಿಪ್ರೇಮವುಳ್ಳವಳಾಗಿಯೂ, ಶೌರ್ಯವುಳ್ಳವ ಳಾಗಿಯೂ ಇರುವ ನಿನ್ನ ಮೇಲೆ ನನ್ನ ಶಸ್ತ್ರವು ಹೇಗೆ ನಡೆ ವುದು ? ನಾನು ಶೂರಪುರುಷರ ಸಂಗಡ ಯುದ್ಧವಾಡುವೆನೇ ಹೊರತು ಸ್ತ್ರೀಯರಿಗೆ ಒಂದು ಮುಳ್ಳನ್ನಾದರೂ ಚುಚ್ಚಿಸ ಲಾರೆನು. ನಿನ್ನ ಪತಿಯು ಗತಿಸಿದ್ದಕ್ಕೆ ನನಗೂ ಬಹಳ ವ್ಯಸನ ವಾಗಿದೆ. ನಿಮ್ಮನ್ನು ನಮ್ಮ ಅಂಕಿತರನ್ನಾಗಿ ಮಾಡುವುದು ನಮ್ಮ ಕೆಲಸವೇ ಹೊರತು ನಿಮ್ಮನ್ನು ಕೊಲ್ಲುವುದು ನಮ್ಮ ಮುಖ್ಯೋದ್ದೇಶವಲ್ಲ. ಆದರೂ ಜರುಗಿಹೋಗ 'ಸಂಗತಿಗೆ ದುಃಖಿಸಿದ್ದರಿಂದ ಪ್ರಯೋಜನವೇನೂ ಇಲ್ಲ. ಈಗಲಾದರೂ ನೀವು ನಾನು ಹೇಳಿದ ಪ್ರಕಾರ ನನಗೆ ವಶರಾಗಿ ಇರುವ ಪಕ್ಷ ದಲ್ಲಿ ಈ ಯುದ್ಧವನ್ನು ನಿಲ್ಲಿಸಿ ನಿಮ್ಮ ದೇಶವಾಸಿಗಳೆಲ್ಲರಿಗೂ ಅಭಯುವನ್ನು ಕೊಡುವೆನು." ಇದಕ್ಕೆ ರಾಮಾಬಾಯಿಯು

ಹೀಗೆಂದಳು "ಈ ಚಿತ್ತೂರು ಸಂಸ್ಥಾನದಲ್ಲಿ ಕ್ಷತ್ರಿಯರಿರುವ ವರೆಗೂ ಈ ರಾಜ್ಯವು ನಿಮ್ಮ ಕೈಗೆ ಸಿಕ್ಕಲಾರದು. ರಾಜಪುತ್ರರ ದೇಹದಲ್ಲಿ ಪ್ರಾಣಗಳಿರುವವರೆಗೂ ಅವರು ನಿಮ್ಮ ಸಂಗಡ ಯುದ್ಧವನ್ನು ಮಾಡುವರೇ ಹೊರತು ದೀನರಾಗಿ ನಿಮಗೆ ಶರಣ ರಾಗುವುದಿಲ್ಲ. ಅವರೆಲ್ಲರೂ ನಿಹತರಾದ ತರುವಾಯ ನಿಮ್ಮ ಇಷ್ಟಪ್ರಕಾರವಾಗಿ ಮಾಡಿಕೊಳ್ಳಬಹುದು". ಅದಕ್ಕೆ ಅಕ್ಬರು "ತುರುಕರು ದುಷ್ಟರೆಂದು ನೀವು ನಮ್ಮನ್ನು ನಿಂದಿಸುವಿರಿ ಆದರೆ ನಿಮಗೂ ನಮಗೂ ಇರುವ ಭೇದವನ್ನು ಹೇಳುವೆನು, ಕೇಳು. ನೀನು ನನ್ನನ್ನು ಕೊಲ್ಲಲು ಅನೇಕ ಪ್ರಯತ್ನಗಳನ್ನು ಮಾಡಿದೆ! ಈಗಲೂ ಕೂಡ ನನ್ನನ್ನು ಕೊಲ್ಲುವುದಕ್ಕೆ ಕೃತನಿಶ್ಚ ಯವುಳ್ಳವಳಾಗಿಯೇ ಇರುವೆ. ನಾನು ನಿಮ್ಮ ಹಿತಕ್ಕಾಗಿ ಹೇಳಿದ ಮಾತುಗಳನ್ನು ನೀನು ಕೇಳದೆ ಇರುವೆ. ನೀನು ಇಷ್ಟುಸಲ ನನ್ನ ಕೈಗೆ ಸಿಕ್ಕಿದರೂ ನಿನನ್ನು ಶಿಕ್ಷಿಸದೆ ಬಿಟ್ಟಿ ರುವೆನು. ಇದರಿಂದಲೇ ನಿಮ್ಮ ಕ್ರೂರತೆಯೂ, ನಮ್ಮ ಸಾ ಧುತ್ವವೂ ಸ್ಪಷ್ಟಪಡುತ್ತದೆ." ಎಂದು ಹೇಳಿ ಆಕೆಯನ್ನು ಪಲ್ಲಕ್ಕಿಯಲ್ಲಿ ಹತ್ತಿಸಿಕೊಂಡು ಹೋಗಿ ಕೋಟೆಯೊಳಗೆ ಬಿಟ್ಟು ಬನ್ನಿರೆಂದು ತನ್ನಸೇವಕರಿಗೆ ಅಜ್ಞಾಪಿಸಿದನು. ಆಗ ರಾಮಾ ಬಾಯಿಯು ತನ್ನ ಪ್ರಯತ್ನಗಳೆಲ್ಲವೂ ನಿರರ್ಥಕಗಳಾದ್ದಕ್ಕೆ ಚಿಂತಿಸುತ್ತಾ ಸ್ವಜಾತಿಯ ನಿಂದೆಯನ್ನು ಕೇಳಿದ್ದರಿಂದ ರೋಷ ದಿಂದ ಕಣ್ಣುಗಳಲ್ಲಿ ಬಾಷ್ಪಗಳನ್ನು ಸುರಿಸುತ್ತಾ, ಪಂಜರದಲ್ಲಿ ಸಿಕ್ಕಿದ ಹುಲಿಯಹಾಗೆ ಏನನ್ನೂ ಮಾಡದೆ ಕಿಲ್ಲೆಯ ದ್ವಾರ ವನ್ನು ಸಮೀಪಿಸಿ ತನ್ನ ಮಕ್ಕಳ ಹತ್ತಿರ ಸೇರಿದಳು. ತರು

ಮಾಯು ಆಕೆಯು ಅಲ್ಲಿ ಕೋಟೆಯೊಳಗಿದ್ದ ರಾಜಪುತ್ರರೆಲ್ಲ ರನ್ನೂ ಕರೆಯಿಸಿ, ಒಂದು ದೊಡ್ಡ ಸಭೆಯನ್ನು ಮಾಡಿ, ಎಲೈ! ಕ್ಷತ್ರಿಯ ವೀರರುಗಳಿರಾ! ಇದುವರೆಗೂ ನೀವು ನಮ್ಮ ಸಂಸ್ಥಾನವನ್ನು ರಕ್ಷಿಸುವುದಕ್ಕಾಗಿ ಸಿಂಹಗಳಹಾಗೆ ಹೋರಾಡಿದಿರಿ. ನಿಮ್ಮ ಬಾಂಧವರಲ್ಲಿ ಅನೇಕರು ಈ ಯುದ್ಧ ದಲ್ಲಿ ಮೃತಿಹೊಂದಿದರು. ಇಷ್ಟಾದರೂ ನಾವು ಗೆಲ್ಲುವೆವೆಂಬ ಆಶೆಯು ತೋರುವುದಿಲ್ಲ. ಕೆಲವು ದಿನಗಳಲ್ಲಿಯೇನೇ ಮ್ಲೇ ಚ್ಛರು ಕೋಟೆಯೊಳಕ್ಕೆ ನುಗ್ಗುವರು. ಆದ್ದರಿಂದ ಇನ್ನು ಪ್ರಾಣಗಳಿಗೆ ಆಶೆಪಡದೆ ನಿಮ್ಮ ಶೌರ್ಯವೆಲ್ಲವನ್ನೂ ತೋರಿಸಿ ವೀರಶಯನವನ್ನು ಹೊಂದುವುದು, ಇದೇ ಕ್ಷಾತ್ರಧರ್ಮವು. ಎಂದು ಅವರಿಗೆ ಉತ್ಸಾಹವುಂಟಾಗುವಹಾಗೆ ಸಂಭಾಷಿಸಿದಳು. ಅದಕ್ಕೆ ಅವರೆಲ್ಲರೂ ಸಂತೋಷದಿಂದ ಯುದ್ಧಕ್ಕೆ ಸನ್ನದ್ಧ ರಾದರು. ಆದರೆ ಅದರಲ್ಲಿ ಒಬ್ಬಸರ್ದಾರನು "ತಾಯೇ! ನಾವು ಹೀಗೆ ವ್ಯರ್ಥವಾಗಿ ಪ್ರಾಣಗಳನ್ನು ಕಳೆದುಕೊಳ್ಳುವದಕ್ಕಿಂತ ಬಾದುಷಾರವರ ಸಂಗಡ ಸಂಧಿಮಾಡಿಕೊಂಡು ರಾಜ್ಯವನ್ನು ಸಂರಕ್ಷಿಸಿಕೊಳ್ಳುವುದು ಮೇಲು" ಎಂದು ಹೇಳಿದನು. ಆ ಮಾತುಗಳನ್ನು ಕೇಳಿ ರಾಣಿ ರಾಮಾಬಾಯಿಯು ಅಸಹ್ಯ ಪಟ್ಟು ಕಣ್ಣುಗಳಲ್ಲಿ ಕೆಂಡಗಳು ಸುರಿಯುವ ಹಾಗೆ ಕ್ರೋಧಾ ಯಮಾನಮಾನಸಳಾಗಿ ಆ ಸರ್ದಾರನನ್ನು ನೋಡಿ "ನನ್ನ ಪ್ರಾಣವಲ್ಲಭನನ್ನು ಕೊಂದ ದುಷ್ಟನ ಸಂಗಡ ಸಂಧಿಮಾ ಡೆಂದು ಹೇಳುವದಕ್ಕೆ ನಿನಗೆ ಹೇಗೆ ಬಾಯಾಡಿತು? ನಿನ್ನ ಮುಖವನ್ನು ನೋಡಲೊಲ್ಲೆನು; ಈ ಕ್ಷಣವೇ ನನ್ನ ಎದುರಿ

ನಿಂದ ತೊಲಗಿಹೋಗು" ಎಂದು ಹೇಳಿದಳು. ಹೀಗೆ ಆಕೆ ಹೇಳಲಾಗಿ ಅಲ್ಲಿದ್ದವರೆಲ್ಲರೂ ಅವನನ್ನು ಅತ್ಯಂತ ತಿರಸ್ಕಾರ ದೃಷ್ಟಿಯಿಂದ ನೋಡಲು ಅವನು ಬಹಳ ಲಜ್ಜಿತನಾಗಿ ತಲೆ ಬಗ್ಗಿಸಿಕೊಂಡು ಹೊರಟುಹೋದನು. ಅಮೇಲೆ ಆಕೆ ಅವರೆಲ್ಲರನ್ನೂ ನೋಡಿ, ಅವರ ಸ್ವಾಮಿಭಕ್ತಿಗೆ ಮೆಚ್ಚಿ ನೀವೆಲ್ಲರೂ ಕ್ಷತ್ರಿಯ ಧರ್ಮವನ್ನು ಬಲ್ಲವರು. ಶತ್ರುವು ಬಳ್ಳೆಯವನಾದರೂ ನಮ್ಮ ಸ್ವಾತಂತ್ರ್ಯವನ್ನು ನಷ್ಟಮಾಡುವದಕ್ಕಾಗಿ ಅವನು ಬಂದಾಗ ನಾವು ಅವನ ಸಂಗಡ ಯುದ್ಧವನ್ನು ಮಾಡಬೇಕೇ ಹೊರತು ಸಂಧಿಮಾಡಬಾರದು. ಕ್ಷತ್ರಿಯನಿಗೆ ಯುದ್ಧದಲ್ಲಿ ಸಾಯುವದು ವಿವಾಹಕ್ಕೆ ಸಮಾನವು. ಸಂಧಿ ಮಾಡಿಕೊಂಡು ಬದುಕುವದು ಸಾವಿಗೆ ಸಮವಾದುದರಿಂದ ಉತ್ತಮ ಕ್ಷತ್ರಿಯರಾದ ನೀವು ಎಂಥಾ ಮರಣವನ್ನು ಕೋರಬೇಕೋ ನಾನು ಬೇರೆ ಹೇಳಬೇಕಾದ ಅಗತ್ಯವಿಲ್ಲ. ಎಂದು ಸಲ್ಲಾಪಿಸಿದಳು. ಆಮೇಲೆ ಸರ್ದಾರರೆಲ್ಲರೂ ಏಕವಾಕ್ಯದಿಂದ "ನಾವೆಲ್ಲರೂ ಮಹಾರಾಣಿಗೋಸ್ಕರವಾಗಿಯೂ, ರಾಜ್ಯಕ್ಕೋಸ್ಕರವಾಗಿಯೂ ಪ್ರಾಣಗಳಮೇಲೆ ಆಶೆಪಡದೆ ವೈರಿಗಳ ಸಂಗಡ ಹೋರಾಡಿ ಭೂದೇವಿಗೆ ರಕ್ತಸ್ನಾನವನ್ನು ಮಾಡಿಸಿ ನಮ್ಮ ಶಿರಗಳನ್ನು ಅರ್ಪಿಸುವೆವು." ಎಂದು ಗರ್ಜಿಸಿದರು. ಆ ಗರ್ಜನೆಗೆ ಎಷ್ಟೋ ಸಂತೋಷಿಸಿ ರಾಮಾಬಾಯಿಯು ತನ್ನ ಕುಮಾರ್ತೆಯರಾದ ಚಂದ್ರಾವತಿಯನ್ನೂ, ಲೀಲಾವತಿಯನ್ನೂ ಕರೆದು ತನ್ನೊಡನೆ ಅವರನ್ನು ಪರಲೋಕಯಾತ್ರೆಗೆ ಬನ್ನಿರೆಂದು ಹೇಗೆ ಹೇಳಲಿ ಎಂದು ವಿಚಾರಪಡುತ್ತಿದ್ದಳು. ಇಷ್ಟರಲ್ಲಿ ಅವರಿ

ಬ್ಬರೂ ಸಂಗತಿಗಳನ್ನೆಲ್ಲಾ ಕೇಳಿ ತಾಯಿಯ ಹತ್ತಿರಕ್ಕೆ ಬಂದು ಕುಳಿತುಕೊಂಡರು. ಅವರಲ್ಲಿ ದೊಡ್ಡಮಗಳ ವಯಸ್ಸು ಹದಿನೇಳು ಸಂವತ್ಸರಗಳೂ, ಚಿಕ್ಕಮಗಳ ವಯಸ್ಸು ಹನ್ನೊಂದು ಸಂವತ್ಸರಗಳೂ ಆಗಿದ್ದವು. ಯೌವನಾವಿರ್ಭಾವ ದಿಂದ ಅತ್ಯಂತ ಸುಂದರವಾಗಿ ಕಾಣಲ್ಪಡುವ ಕುಮಾರ್ತೆಯ ರನ್ನು ನೋಡಿ ಸ್ವಲ್ಪಹೊತ್ತು ಆಕೆಗೆ ಏನು ಹೇಳುವದಕ್ಕೂ ಬಾಯಾಡದೆ ಹೋಯಿತು. ಸ್ವಲ್ಪಹೊತ್ತಿಗೆ ಆಕೆ ಧೈರ್ಯವನ್ನು ತಂದುಕೊಂಡು, ಪುತ್ರಿಯರ ಸಂಗಡ ಹೀಗೆಂದಳು. "ನಾನು ಎಷ್ಟು ಪ್ರಯತ್ನಗಳನ್ನು ಮಾಡಿದರೂ ದುರ್ಭಾಗ್ಯವಶದಿಂದ ನವಗೆ ಜಯವುಂಟಾಗದೆ ತುರುಕರ ಕೈಲಿ ನಾವು ಬೀಳಬೇಕಾ ಗಿರುವುದು. ಆದ್ದರಿಂದ ನಾವುಗಳೆಲ್ಲರೂ ಅಗ್ನಿದೇವನನ್ನು ಆಶ್ರ ಯಿಸಿ ಅಪವಿತ್ರವಾದ ತುರುಕರ ಕೈಗೆ ಸಿಕ್ಕದೆ ಶಾಶ್ವತಸುಖ ವುಂಟಾಗುವ ಸ್ವರ್ಗಕ್ಕೆ ಹೋಗಿ ಸುಖಪಡಬೇಕೆಂದು ನಿಶ್ಚಯಿ ಸಿದ್ದೇನೆ. ಆದ್ದರಿಂದ ನೀವುಗಳೆಲ್ಲರೂ ಈ ಲೋಕದಲ್ಲಿಯೇ ಇದ್ದುಕೊಂಡು ಅನೇಕ ದುಃಖಗಳನ್ನು ಅನುಭವಿಸಬೇಕೆಂದು ಯೋಚಿಸಿದ್ದೀರೋ, ಇಲ್ಲವೇ ಪತಿವ್ರತೆಯರ ಹಾಗೆ ಪರಮ ಪದವನ್ನು ಹೊಂದಬೇಕೆಂದು ಯೋಚಿಸಿದ್ದಿರೋ ತ್ವರೆಯಾಗಿ ಹೇಳಿರಿ." ಅದಕ್ಕೆ ಚಂದ್ರಾವತಿಯು ಬಹಳ ಉತ್ಸಾಹದೊಡನೆ "ಅಮ್ಮಾ! ನಾವು ರಾಜಕನ್ಯೆಯರಾಗಿ ಪ್ರಾಣಗಳನ್ನು ಅಡಗಿಸಿ ಕೊಳ್ಳೋಣವೇ? ಇಂಥಾ ಸ್ಥಿತಿಯಲ್ಲಿ ಬದುಕಿದ್ದು ತುರುಕರ ಕೈಗೆ ಸಿಕ್ಕಿ ಮಾನಭಂಗಪಡುವುದಕ್ಕೆ ಹೇಗೆ ಇಷ್ಟವಾಗುವುದು! ನಮ್ಮ ಪೂರ್ವಿಕರೆಲ್ಲರೂ ಇಂಥಾ ಸಂಕಟಸಮಯದಲ್ಲಿ

ಮಾಡಿದಸ್ತುತ್ಯಕೃತ್ಯವನ್ನೇ ಮಾಡುವುದಕ್ಕೆ ನಾವುಗಳು ಸಿದ್ಧರಾಗಿದ್ದೇವೆ" ಎಂದು ಹೇಳಿದಳು. ಆಬಾಲಿಕೆಯ ಧೀರವಚನಗಳನ್ನು ಕೇಳಿ ರಾಮಾಬಾಯಿಯು ಬಹಳವಾಗಿ ಸಂತೋಷಪಟ್ಟು ಅವರನ್ನು ಆಲಿಂಗಿಸಿಕೊಂಡು, ಇಂಥಾ ಸುಗುಣವತಿಗಳು ಈ ಜಗತ್ತಿನಲ್ಲಿ ಇದ್ದ ಪಕ್ಷದಲ್ಲಿ ಎಂಥಾ ಮಹತ್ಕಾರ್ಯಗಳನ್ನು ಮಾಡಬಲ್ಲರೋ ಎಂದು ಯೋಚಿಸಿ, ದುಃಖಾವೇಶಪರವಶಳಾಗಿ ಕಣ್ಣುಗಳಲ್ಲಿ ಬಾಷ್ಪಬಿಂದುಗಳನ್ನು ಸುರಿಸುತ್ತಾ ಸ್ವಲ್ಪ ಹೊತ್ತು ದುಃಖಿಸಿದಳು. ಆಗ, ಆ ಬಾಲೆಯರು ಕೂಡ ಆರ್ತಧ್ವನಿಯಿಂದ ಶೋಕಿಸಿದರು. ಹೀಗೆ ಸ್ವಲ್ಪ ಹೊತ್ತು ಮನೋದುಃಖವು ಬಾಷ್ಪರೂಪದಿಂದ ಹೊರಪಟ್ಟತರುವಾಯ ರಾಮಾಬಾಯಿಯು ದುಃಖವನ್ನು ಅಡಗಿಸಿಕೊಂಡು ಕುವರಿಯರಿಗೆ ಧೈರ್ಯವನ್ನು ಹೇಳಿ ಅವರನ್ನು ಸಮಾಧಾನ ಪಡಿಸಿದಳು. ಬಳಿಕ ಅವರನ್ನು ಕರೆದುಕೊಂಡು, ರಾಜಪುತ್ರರು ಯುದ್ಧಕ್ಕೆ ಸನ್ನದ್ಧರಾಗಿರುವ ಸ್ಥಳಕ್ಕೆ ಹೋಗಿ, ಅವರಲ್ಲಿ ಪ್ರತಿಯೊಬ್ಬನಿಗೂ ಉತ್ಸಾಹವು ಹುಟ್ಟುವಹಾಗೆ ಮಾತನಾಡಿ, ನಾಳೆ ಪ್ರಾತಃಕಾಲಕ್ಕೆ ನೀವೆಲ್ಲರೂ ಪ್ರಾಣಗಳು ಹೋಯಿತೆಂದು ತಿಳಿದುಕೊಂಡು ಶತ್ರುಸೇನೆಯೊಡನೆ ಯುದ್ಧವನ್ನುಮಾಡಿ ಮುಕ್ತಿಯನ್ನು ಪಡೆಯಿರಿ, ಎಂದು ಹೇಳಿ, ಅವರ ಪತ್ನಿಯರ ಸಮೀಪಕ್ಕೆ ಹೋದಳು. ಪುರುಷರುಯುದ್ಧಕ್ಕೆ ಹೋದ ಒಡನೆಯೇ ಅವರ ಸ್ತ್ರೀಯರಲ್ಲಿ ಪ್ರತಿಯೊಬ್ಬರೂ ತಮ್ಮ ಚಿತಿಗಳನ್ನು ಸಿದ್ಧಪಡಿಸಿಕೊಂಡು ಅದರಮೇಲೆ ತಾವು ಕೂತುಕೊಂಡು ಬೆಂಕಿಹತ್ತಿಸಿಕೊಂಡು ಪತಿವ್ರತೆಯರ ಪದವಿಗೆ ಹೋಗಬೇಕೆಂಬುದಾ

ಗಿಯೂ, ತುರುಕರು ಕೋಟೆಯೊಳಕ್ಕೆ ಪ್ರವೇಶಿಸುವ ವೇಳೆಗೆ ಅಲ್ಲಿ ಉರಿ ಹೊಗೆಗಳೂ, ಭಸ್ಮರಾಶಿಗಳೂ ಹೊರತು ಮತ್ತೇನೂ ಇಲ್ಲದಂತೆ ಮಾಡಿತೆಂದೂ ಆ ವೀರಪತ್ನಿಯರಿಗೆ ಆಜ್ಞಾಪಿಸಿ ಡಬೇಕೆ, ಆ ರಾಣಿಸ್ವಮಂದಿರಕ್ಕೆ ಹೋದಳು. ಅಲ್ಲಿ ರಾತ್ರಿಯೆಲ್ಲಾ ರಾಣಿಯು ಈಶ್ವರನನ್ನು ಪ್ರಾರ್ಥಿಸುತ್ತಿದ್ದಳು. ಕಡಮೆ ಸ್ತ್ರೀಯರೆಲ್ಲರೂ ತಮ್ಮ ತಮ್ಮ ಪ್ರಯತ್ನಗಳಲ್ಲಿದ್ದರು. ಬೆಳಗಾಗುವ ವರೆಗೂ ರಾಜಪುತ್ರರುಗಳೆಲ್ಲರೂ ಯುದ್ಧಸನ್ನದ್ಧರಾಗಿ ಒಬ್ಬೊಬ್ಬರಾಗಿ ಹೊರಟು ಕೋಟೆಬಾಗಿಲ ಸಮೀಪದಲ್ಲಿ ಗುಂಪುಕೂಡಿದರು. ಆಗ ಅವರ ಮನೋವಿಕಾರಗಳೆಲ್ಲವೂ ಏಕೀಭವಿಸಿ, ಶತ್ರುಸಂಹಾರೇಚ್ಛೆಯಲ್ಲಿ ಕಲಸಿ ಇದ್ದದ್ದರಿಂದ ಅವರು ಆಗ ಪ್ರತ್ಯಕ್ಷಕಾಲಾಂತಕರ ಹಾಗೆ ಕಾಣಲ್ಪಡುತ್ತಿದ್ದರು. ಅವರ ಹೆಂಡತಿಯರು ತಮ್ಮ ಪ್ರಿಯಪತಿಗಳನ್ನು ಕಡೇಸಾರಿ ದರ್ಶನ ಮಾಡಿಕೊಂಡುಹೋಗಬೇಕೆಂದು ಯೋಚಿಸಿ, ಅಲ್ಲಿಗೆಬಂದು, ಈಗ ಬಿಟ್ಟರೆ ಇನ್ನು ಕಾಣಲ್ಪಡರೆಂದು ತಿಳಿದು ತಮ್ಮ ಪ್ರಿಯಪತಿಗಳನ್ನೂ, ಪುತ್ರರನ್ನೂ, ಅಣ್ಣತಮ್ಮಂದಿರನ್ನೂ ಆಲಂಗಿಸಿಕೊಳ್ಳುತ್ತ ತಣಿವು ತೀರದಂತೆ ನೋಡುತ್ತಿದ್ದರು. ಅವರಮಧ್ಯೆ ಅವರೆಲ್ಲರಿಗೂ ಪೂಜ್ಯಳಾದ ರಾಮಾಬಾಯಿಯು ತನ್ನ ಕುಮಾರ್ತೆಯರಿಬ್ಬರನ್ನೂ ಎರಡು ಪಕ್ಕದಲ್ಲಿಯೂ ಇಟ್ಟುಕೊಂಡು ಬಹಳ ಖೇದದಿಂದ ಆವೀರರನ್ನೂ ವೀರಪತ್ನಿಯರುಗಳನ್ನೂ ನೋಡುತ್ತಿದ್ದಳು. ಹೀಗೆ ಒಂದು ಮುಹೂರ್ತದ ತನಕ ಅಲ್ಲಿಪುರುಷರೂ, ಸ್ತ್ರೀಯರೂ ಗೊಳ್ಳೆಂದು ರೋದನ ಮಾಡಿದರು. ಇಷ್ಟರಲ್ಲಿ ರಾಮಾಬಾಯಿಯುಧೈರ್ಯವನ್ನು ತಂದು

ಕೊಂಡು ಸ್ತ್ರೀ ಸಮೂಹದಿಂದ ಹೊರಟುಬಂದು ಉಚ್ಚಸ್ವರ ದಿಂದ "ಎಲೆ ರಾಜಪುತ್ರರುಗಳಿರಾ ! ನೀವು ನಿಮ್ಮ ಶರೀರಸಹಿತ ನಿಮ್ಮ ಸ್ತ್ರೀಯರ ಮಾನವನ್ನು ಕೂಡ ಮ್ಲೇಚ್ಛರಿಗೆ ಒಪ್ಪಿಸುವು ದಕ್ಕೆ ನಿಶ್ಚಯಿಸಿದಿರಾ ! ಏನು ? " ಎಂದು ಕೇಳಿದಳು. ಈ ಮಾತುಗಳು ಕರ್ಣಶೂಲಗಳ ಹಾಗೆ ತೋರಿದ್ದರಿಂದ "ಹಾಗಲ್ಲ ಹಾಗಲ್ಲ" ಎಂಬ ಶಬ್ದಗಳು ಎಲ್ಲರ ಬಾಯಿಗಳಿಂದಲೂ ಹೊರಟವು.

"ಹಾಗಾದರೆ ರೋದನವನ್ನು ನಿಲ್ಲಿಸಿ,ಪುರುಷರು ಯುದ್ಧ ಕ್ಕೂಸ್ತ್ರೀಯರು ಅಗ್ನಿಪ್ರವೇಶಕ್ಕೂ ಹೊರಡತಕ್ಕದ್ದು, ವಿಳಂಬ ವನ್ನು ಮಾಡಲಾಗದು," ಎಂದು ರಾಮಾಬಾಯಿಯು ಆಜ್ಞಾಪಿಸಿ ದಳು.ಯಜಮಾನಿಯ ಆಜ್ಞೆಯಾದೊಡನೆಯೇ ಪುರುಷರು ತಮ್ಮ ಖಡ್ಗಕಾರ್ಯಗಳಿಗೂ, ಸ್ತ್ರೀಯರು ತಮ್ಮ ಅಗ್ನಿಕಾರ್ಯಗಳಿಗೂ ಹೊರಟರು. ಅಲ್ಲಿ ತುರುಕರು ಆದಿನ ಹೇಗಾದರೂ ಕೋಟೇ ಬಾಗಿಲನ್ನು ಒಡೆದು ಒಳಕ್ಕೆ ಪ್ರವೇಶಿಸಬೇಕೆಂದು ಪ್ರಯತ್ನ ಪಡುತ್ತಿದ್ದರು. ಅಷ್ಟರಲ್ಲಿಯೇ ಕೋಟೆಯ ಪೂರ್ವದ್ವಾರದ ಕವಾಟವನ್ನು ತೆರೆದುಕೊಂಡು ಸಾವಿರಾರು ರಾಜಪುತ್ರರುಗಳು "ಹರಹರ ಮಹಾದೇವಾ" ಎಂಬ ರಣನಾದವನ್ನು ಮಾಡುತ್ತಾ ಹೊರಟರು. ಅವರ ಭಯಂಕರವಾದ ಉಗ್ರತ್ವವನ್ನು ನೋಡಿ ತುರುಕರು ಸ್ವಲ್ಪಹಿಂದಕ್ಕೆ ಸರಿದರು. ಆದರೆ ಪುನಃ ಮುಂದಕ್ಕೆ ಬಂದು ಒಬ್ಬರಿಗೊಬ್ಬರು ಹೋರಾಡಲಾರಂಭಿಸಿದರು. ಅವರಿಗೆ ಅಲ್ಲಿ ಘೋರಯುದ್ಧವು ಜರುಗಿತು.ಒಂದುಸಲ ಹತಾಶರಾದರೂ, ಎರಡನೇಸಲ ಸ್ವಲ್ಪವಾಗಿ ಗೆದ್ದಪಕ್ಷದಲ್ಲಿ ನಾವೇ ರಾಜರೆಂದು

ಹೇಳುತ್ತಾ ಹೋರಾಡುವವರುಳ್ಳ ಆ ರಣವು ಹದಿನೆಂಟು ದಿನದ ಭಾರತಯುದ್ಧವನ್ನು ಹೋಲುತ್ತಿತ್ತು, ಹಿಂದುಗಳು ಒಂದುಸಲವೂ ತುರುಕರು ಒಂದುಸಲವೂ ಶೌರ್ಯಾತಿಶಯ ವನ್ನೆಲ್ಲಾ ತೋರಿಸುತ್ತಿದ್ದರು. ಈ ರಾಜಪುತ್ರರನ್ನು ಹೇಗಾ ದರೂ ಸೋಲಿಸಿ ಕೋಟೆಯೊಳಕ್ಕೆ ಹೋಗಬೇಕೆಂದು ತುರು ಕರು ಘೋರವಾಗಿ ಹೊಡೆದಾಡುತ್ತಿದ್ದರು. "ನಂದುವ ದೀಪಕ್ಕೆ ಕಾಂತಿ ಹೆಚ್ಚು" ಎಂಬಗಾಮತಿಗೆ ಸರಿಯಾಗಿ ಈ ರಾಜಪುತ್ರರ ವೀರಾವೇಶವು ಅಷ್ಟಕ್ಕಷ್ಟಕ್ಕೆ ಹೆಚ್ಚುತ್ತಿತ್ತು. ಹೀಗೆ ಸ್ವಲ್ಪ ಹೊತ್ತು ಒಬ್ಬರಿಗೊಬ್ಬರು ಹೊಡೆದಾಡಿ ಶವದ ರಾಶಿಯನ್ನು ತುಂಬಿಸಿದರು. ತರುವಾಯ ತುರುಕರ ಸೈನ್ಯವು ನಾಲ್ಕುದಿಕ್ಕಿ ನಿಂದಲೂ ಒಂದೇಪೆಟ್ಟಿನಲ್ಲಿ ರಾಜಪುತ್ರರಮೇಲೆ ಕವಿದು ಕೊಳ್ಳಲಾಗಿ ರಾಜಪುತ್ರರನೇಕರು ಶತ್ರುಗಳಿಗೆ ಬೆನ್ನುಕೊಟ್ಟು ಓಡಲಾರಂಭಿಸಿದರು. ಇಷ್ಟರಲ್ಲಿಯೇ ಸೌಲಂಬಾರನೆಂಬ ರಾಜಪುತ್ರರ ಮುಖ್ಯಸರ್ಧಾರನೊಬ್ಬನು ಬಿದ್ದನು. ಆತನ ಮೃತ್ಯುವನ್ನು ನೋಡಿ ಉಳಿದ ರಾಜರುಗಳೆಲ್ಲರೂ ಧೈರ್ಯವನ್ನು ಬಿಟ್ಟು ಯುದ್ಧಪರಾಙ್ಮುಖರಾಗಲು ಯತ್ನಿಸುತ್ತಿದ್ದರು. ಆದರೆ ಅವರೆಲ್ಲರನ್ನೂ ಪುನಃ ಯುದ್ಧಕ್ಕೆ ತಿರುಗಿಸುವುದಕ್ಕೆ ಒಂದು ಕಾರಣ ಜರುಗಿತು. ಅದರಿಂದ ಅವರೆಲ್ಲರೂ ಪುನಃ ಯು ದ್ಧಕ್ಕೆ ಸನ್ನದ್ಧರಾದರು. ಆ ಕಾರಣವೇನೆಂದರೆ,—ಯುದ್ಧವು ನಡೆಯುವುದಕ್ಕೆ ಕೆಲವು ದಿನಗಳ ಹಿಂದೆ ಹದಿನೆಂಟು ಸಂವತ್ಸ ರದ ವಯಸ್ಸಿನ ರಾಜಪುತ್ರನೊಬ್ಬನಿಗೊಬ್ಬನಿಗೂ ಹದಿನೇಳು ಸಂವತ್ಸರ ವಯಸ್ಸುಳ್ಳ ಬಾಲೆಗೂ ಮದುವೆಯಾಗಿತ್ತು.

ಯುದ್ಧಕ್ಕೆ ಪ್ರಾರಂಭವಾದ ದಿನ ಆ ಹುಡುಗನು ಖಡ್ಗವನು ತಗೆದುಕೊಂಡು ಯುದ್ಧಕ್ಕೆ ಹೊರಟನು. ಆಗ ಆ ವೀರನಾರೀರತ್ನವು ತನ್ನ ಭರ್ತನೊಡನೆ ಯುದ್ಧಕ್ಕೆ ಹೋಗುತ್ತೇನೆಂದು ಸನ್ನದ್ಧಳಾದಳು. ಹೋಗಬೇಡವೆಂದು ಯಾರು ಎಷ್ಟು ಹೇಳಿದರೂ ಕೇಳದೆ ತನ್ನ ಪತಿಯು ದೇಹವನ್ನು ಬಿಡುವ ಸ್ಥಳದಲ್ಲಿಯೇ ತನ್ನ ದೇಹವನ್ನು ಬಿಡುವೆನೆಂದು ದೃಢವಾಗಿ ಪಟ್ಟುಹಿಡಿದಳು. ಮಗಸೊಸೆಯರ ನಿಶ್ಚಯವನ್ನು ನೋಡಿ ಆ ಹುಡುಗನ ತಾಯಿಯು ಸಂತೋಷಪಟ್ಟು, ಅವರಿಗೆ ಪ್ರೋತ್ಸಾಹವುಂಟಾಗುವಹಾಗೆ ಅನೇಕ ವಚನಗಳನ್ನು ಹೇಳಿ, ಅವರ ಕೈಗಳಲ್ಲಿ ಖಡ್ಗವನ್ನು ಕೊಟ್ಟು ಸ್ವಲ್ಪ ದೂರದವರೆಗೂ ಅವರನ್ನು ಕಳುಹಿಸಿಕೊಟ್ಟು ತಾನು ಹಿಂದಕ್ಕೆ ಹೋದಳು. ಹಿಂದೆ ವರ್ಣಿಸಿದಹಾಗೆ ಕೆಲವು ರಾಜಪುತ್ರರುಗಳು, ಯುದ್ಧರಂಗದಿಂದ ಓಡಿಬರುತ್ತಿದ್ದ ಕ್ಷತ್ರಿಯರು ನಾಚಿಕೆಯಿಂದ ಪುನಃ ಹಿಂತಿರುಗಿ ಯುದ್ಧರಂಗದೊಳಕ್ಕೆ ಪ್ರವೇಶಿಸಿದರು. ಆ ಬಾಲಕನೂ, ಆತನ ಪತ್ನಿಯೂ ಅನೇಕರನ್ನು ಯಮಸದನಕ್ಕೆ ಕಳುಹಿಸಿ ಕೊನೆಗೆ ಅವರೂ ವೀರಸ್ವರ್ಗಸುಖವನ್ನು ಅನುಭವಿಸುವುದಕ್ಕಾಗಿ ಯುದ್ಧರಂಗದಲ್ಲಿ ಹತರಾದರು. ತರುವಾಯ ತುರುಕರು ಹತಶೇಷರಾದ ಕ್ಷತ್ರಿಯರನ್ನು ಕೊಂದು ಕೋಟೆಯೊಳಕ್ಕೆ ಹೋಗಲು ಸಿದ್ಧರಾದರು. ಸ್ವಲ್ಪ ದಿನಗಳಿಗೆ ಹಿಂದೆ ಸೌಖ್ಯಕ್ಕೆ ಆವಾಸಸ್ಥಾನವಾಗಿದ್ದಂಥಾ ಜಗಮಲ್ ಮಹಾರಾಜರವರ ಕೋಟೆಯು ಆಗ ದುಃಖಕ್ಕೆ ತೌರುಮನೆಯಾಯಿತು! ರಾಜಗೃಹದ ಹತ್ತಿರ ಚಿತಿಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ರಾಣೀ ರಾಮಾಬಾ

ಯೆಯುವರು ಎರಡು ಪಕ್ಕಗಳಲ್ಲಿ ಒಬ್ಬೊಬ್ಬ ಕಾವಲಾರ್ತ
ಯನ್ನು ಇಟ್ಟುಕೊಂಡು ಇತರ ರಾಜಸ್ತ್ರೀಯರ ಸಂಗಡ ಬಹಳ
ವ್ಯಸನದೊಡನೆ ಕಾಳಿತುಕೊಂಡಿದ್ದರು ಅವರೆಲ್ಲರೂ ಸ್ವಲ್ಪ
ಹೊತ್ತು ರಾಜಪುತ್ರರುಗಳಿಗೆ ಜಯವನ್ನು ಕೊಡೆಂಬುದಾಗಿ
ಈಶ್ವರನನ್ನು ಪ್ರಾರ್ಥಿಸಿ, ತಲೆಗಳನ್ನು ಎತ್ತಿ, ಏನು ವಾರ್ತೆ
ಎಂದು ಎದುರುನೋಡುತ್ತಿದ್ದರು ಇಷ್ಟರಲ್ಲಿಯೇ ಶರೀರವೆಲ್ಲಾ
ರಕ್ತಮಯವಾಗಿ ಲೆಕ್ಕವಿಲ್ಲದಷ್ಟು ಗಾಯುಗಳಿಂದ ಬಾಧೆಪಡು
ತ್ತಿರುವ ಪುರುಷನೊಬ್ಬನು ಬಹುಜಾಗ್ರತೆಯಿಂದ ಅಲ್ಲಿಗೆ
ಬಂದನು. ಅವನನ್ನು ಗುರುತುಹಿಡಿದು "ಎಲೈ ರಾಮಸಿಂಗಾ!
ಜಯವೇನು?" ಎಂದು ಕೇಳಿದಳು. ಇಷ್ಟರಲ್ಲಿ ಆ ಪುರುಷನು
ನಿಂತುಕೊಳ್ಳಲಾರದೆ ಭೂಮಿಯ ಮೇಲೆ ಬಿದ್ದು ತಲೆಯನ್ನೆತ್ತಿ
ರಾಮಾಬಾಯಿಗೆ ವಂದನೆಗಳನ್ನಾಚರಿಸಿ, "ಅಮ್ಮಾ ಇನ್ನು
ಎಲ್ಲಿಯ ಜಯವು! ಆಯುಧವನ್ನು ಹಿಡಿದುಕೊಳ್ಳುವಷ್ಟು
ಶಕ್ತಿಯು ನಮಗೆ ಇರುವವರೆಗೂ ನಾವು ಹೋರಾಡಿ ವೈರಿಗಳ
ಶವದ ಗುಡ್ಡೆಯನ್ನು ಮಾಡಿದೆವು. ಆದರೆ ನಮ್ಮ ದುರಾದೃಷ್ಟ
ದಿಂದ ನಮ್ಮವರೆಲ್ಲರೂ ಮಡಿದರು. ಒಬ್ಬಿಬ್ಬರು ಉಳಿದಿರು
ವರು ಆದರೆ ಅವರೂ ಮೃತಿಹೊಂದಿದವರೇ ಎಂದು ತಿಳಿಯ
ಬೇಕು ಪೂರ್ವದ್ವಾರದ ಬಳಿಯಲ್ಲಿ ಬಿದ್ದಿರುವ ಹೆಣದ ಗುಡ್ಡೆ
ಯನ್ನು ಸ್ವಲ್ಪ ಹೊತ್ತಿನಲ್ಲಿಯೇ ತೆಗೆದು ಹಾಕಿ ತುರುಕರು
ಕೋಟೆಯೊಳಕ್ಕೆ ಬರಬಲ್ಲರು" ಎಂದು ಹೇಳಿ ಮಾತನಾಡುವ
ದಕ್ಕಾಗದೆ ಗಂಟಲು ಕಟ್ಟಿಕೊಂಡು ಪ್ರಾಣವನ್ನು ಬಿಟ್ಟನು.

ಅವನು ಇಂಥ ಕರ್ಣಕಠೋರವಾದ ವರ್ತಮಾ
ನವನ್ನು ಹೇಳಿ ಪ್ರಾಣ ಬಿಡುವದನ್ನು ನೋಡಿ ರಾಜಪುತ್ರ

ಸ್ತ್ರೀಯರೆಲ್ಲರನ್ನೂ ನೋಡಿ ಆಕೆ ಹೀಗೆಂದಳು—" ಸಹೋದರಿಗಳಿರಾ ! ಪ್ರಾಣಸಮಾನರಾದ ನಿಮ್ಮ ಪತಿಗಳೂ, ಸಹೋದರರೂ, ಪುತ್ರರೂ ಯುದ್ಧದಲ್ಲಿ ಸತ್ತು ಸ್ವರ್ಗಕ್ಕೆ ಹೋದರು. ಅವರ ಅಂಶವು ನಿಮ್ಮಲ್ಲಿಯೂ ಉಂಟಾಗಿರುವುದು ಇನ್ನು ಆಲಸ್ಯವನ್ನು ಮಾಡಿದ ಪಕ್ಷದಲ್ಲಿ ವೀರಕಾಂತೆಯರೂ ವೀರಮಾತೆಯರೂ ಆದ ನೀವುಗಳು ತುರುಕರಿಂದ ಸೆರೆಹಿಡಿಯಲ್ಪಟ್ಟವರಾಗಿ ದೂಷಿತರಾಗುವಿರಿ. ಅವರಿಗೆ ದಾಸಿಯರಾಗಿ ಇರಬೇಕಾಗವುದು. ಇಂಥ ಶಬ್ದಗಳು ಕೂಡ ನನಗೆ ಎಷ್ಟೋ ಕರ್ಣಕಠೋರವಾಗಿವೆ. ಆದ್ದರಿಂದ ಶೀಘ್ರವಾಗಿ ಅಗ್ನಿಯಲ್ಲಿ ಪ್ರವೇಶಿಸಿರಿ. ಹೀಗೆ ಮಾಡಿದ್ದಾದರೆ ಸ್ವರ್ಗದಸುಖವನ್ನು ಅನುಭವಿಸುವಿರಿ " ಎಂದು ಹೇಳಿದಳು. ಆ ಮಾತುಗಳನ್ನು ಕೇಳಿ ಎಲ್ಲರೂ ನಾವುಗಳು ಸಿದ್ಧರಾಗಿಯೇ ಇದ್ದೇವೆಯೆಂದು ಕೂಗಿಕೊಂಡು, ತಮ್ಮ ತಮ್ಮ ಎಳೇ ಮಕ್ಕಳನ್ನು ತೆಗೆದುಕೊಂಡು ಅಗ್ನಿಯಲ್ಲಿ ಧುಮುಕುವದಕ್ಕೆ ಸನ್ನದ್ಧರಾದರು. ಇಷ್ಟರಲ್ಲಿಯೇ ಪೂರ್ವದ್ವಾರವನ್ನು ಪ್ರವೇಶಿಸಿದ ತುರುಕರ " ದೀನ್, ದೀನ್ " ಎಂಬ ರಣಘೋಷವು ಕೇಳಿ ಬಂದದ್ದರಿಂದ, ಸ್ತ್ರೀಯರೆಲ್ಲರೂ ಚಿತಿಗಳ ಮೇಲೆಹತ್ತಿ ಚಿತಿಗಳಿಗೆ ಅಗ್ನಿಯನ್ನು ಮುಟ್ಟಿಸಿದರು. ಕ್ಷಣದಲ್ಲಿಯೇ ಕೋಟೆಯೆಲ್ಲವೂ ಅಗ್ನಿಮಯವಾಯಿತು. ಉರಿಯುವ ಉರಿಯ ದಾಹಕ್ಕೆ ತಾಳಲಾರದೆ ತುರುಕರ ಸೈನ್ಯವು ಹಿಂದಕ್ಕೆ ಜರುಗಿತು

ಆದರೆ ಒಬ್ಬ ರಾಜಪುತ್ರಸ್ತ್ರೀಯಾದರೂ ಉರಿಯಿಂದ ತಪ್ಪಿಸಿಕೊಂಡು ಹೋಗಲಿಲ್ಲ. ಉರಿಯೆಲ್ಲವೂ ತಣ್ಣಗಾದನಂತರ

ಅಕ್ಬರು ಬಾದುಷಾ ಕೋಟೆಯನ್ನು ನೋಡಲು ಬಂದನು. ಆಗ ಕೋಟೆಯು ಜನಶೂನ್ಯವಾಗಿಯೂ ನಿಶ್ಶಬ್ದವಾಗಿಯೂ ಮಹಾ ಭಯಂಕರವಾಗಿಯೂ ತೋರಿತು. ಭಸ್ಮಗಳಾಗಿ ಬಿದ್ದಿರುವ ಆರ್ಯವೀರಾಂಗನೆಯರನ್ನು ನೋಡಿ ಬಾದುಷಾ ಬಹಳ ದುಃಖಿಸಿ "ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುವದರಲ್ಲಿ ಆರ್ಯಸ್ತ್ರೀಯರ ಸಮಾನ ಮತ್ತಾವ ಸ್ತ್ರೀಯರೂ ಬರಲಾರರು. ಇವರೇ ಉತ್ತಮೋತ್ತಮ ಪತಿವ್ರತೆಯರು," ಎಂದು ಹೇಳಿದನು.

ಈ ಚರಿತ್ರೆಯಲ್ಲಿ ಪತಿಭಕ್ತಿ, ಧೈರ್ಯ ಸಾಹಸಗಳನ್ನು ಕುರಿತು ಚರಿತ್ರನಾಯಿಕೆಯಾದ ರಾಮಾಬಾಯಿಯನ್ನೂ ಪಾತಿವ್ರತ್ಯದಲ್ಲಿ ಉಂಟಾದ ತತ್ಪರತ್ವ ವಿಷಯವಾಗಿ ರಾಜಪುತ್ರಸ್ತ್ರೀಯರನ್ನೂ ಬಾಲ್ಯದಂಪತಿಗಳನ್ನೂ ಮತ್ತು ಔದಾರ್ಯಕ್ಕಾಗಿ ಅಕ್ಬರು ಬಾದಷಾನನ್ನೂ, ಸಾವಿರ ಬಾಯಿಗಳಿಂದ ಕೊಂಡಾಡಬೇಕು.

---

# ೨. ಪದ್ಮಿನಿ.

---

ಈ ಪತಿವ್ರತಾ ತಿಲಕವು ೧೨ ನೆಯ ಶತಾಬ್ದದ ಪ್ರಾರಂಭದಲ್ಲಿ ಜನಿಸಿದಳು. ಈಕೆಯ ತಂದೆ ಸಿಂಹಳದ್ವೀಪವಾಸಿಯಾದ ಹಮೀರಸಿಂಹಚವ್ಹಾಣನು. ಈ ಸತೀರತ್ನವು ಅಸಮಾನರೂಪವತಿಯಾದ್ದರಿಂದ ಜನನೀ ಜನಕರು ಆಕೆಗೆ "ಪದ್ಮಿನಿ" ಯೆಂದು ಹೆಸರಿಟ್ಟರು. ಪದ್ಮಿನಿಯು ವಿವಾಹಯೋಗ್ಯಳಾದ ಮೇಲೆ ರಜಪೂತಸ್ಥಾನಕ್ಕೆ ಸೇರಿದ ಮೇವಾಡ ಸಂಸ್ಥಾನಕ್ಕೆ ಅಧೀಶ್ವರನಾದ ಭೀಮಸಿಂಹರಾಣಾಗೆ ಆಕೆಯನ್ನು ಕೊಟ್ಟು ವಿವಾಹವನ್ನು ಮಾಡಿದರು. ವಿವಾಹಾನಂತರ ಪದ್ಮಿನಿಯು, ತನ್ನ ರೂಪಕ್ಕೆ ಜತೆಯಾಗಿ ಸುಗುಣಗಳು ಸಹಾಯವಾಗಿರಲು, ಪತಿಗೆ ಪ್ರಾಣತುಲ್ಯಳಾದಳು ಆ ಕಾಲದಲ್ಲಿ ಆ ರಾಜ್ಯವು ರಾಣಾಲಕ್ಷ್ಮಣಸಿಂಹನೆಂಬ ಬಾಲರಾಜನ ಪರಿಪಾಲನೆಯಲ್ಲಿ ಇತ್ತು. ಆದರೆ ಆತನು ಬಾಲಕನಾದ್ದರಿಂದ ಆತನ ಚಿಕ್ಕಪ್ಪನಾದ ಭೀಮಸಿಂಹನೇ ರಾಜ್ಯತಂತ್ರಗಳನ್ನು ನಡಿಸುತ್ತಲಿದ್ದನು. ಭೀಮಸಿಂಹನು ಬಹಳ ಶೂರನೂ ಚತುರನೂ ಆದ್ದರಿಂದ, ಆತನ ರಾಜ್ಯಕ್ಕೆ ಸ್ವಲ್ಪವೂ ಶತ್ರುಗಳ ಭಯವು ಇಲ್ಲದೆ ಪ್ರಜೆಗಳು ಸುಖವಾಗಿ ಇದ್ದರು. ಆದರೆ ಅವರ ದುರದೃಷ್ಟದಿಂದ ಸ್ವಲ್ಪ ಕಾಲದಲ್ಲಿಯೇನೇ ದಿಲ್ಲಿಬಾದುಷಾನಾದ ಅಲ್ಲಾವುದ್ದೀನನು ಮೇವಾಡ ರಾಜಧಾನಿಯಾದ ಚಿತ್ತೂರಿನ ಮೇಲೆ ದಂಡೆತ್ತಿ ಹೊರಟನು. ಈ ಬಾದುಷಾ ಪದ್ಮಿನಿಯ ಅಸಮಾನ

ಸೌಂದರ್ಯವನ್ನು ಕೇಳಿ ಆಕೆಯಲ್ಲಿ ಅಧಿಕಾಭಿಲಾಷೆಯುಳ್ಳವನಾದನು. ಅಸಹಾಯಶೂರರಾದ ರಾಜಪುತ್ರರ ಸಂಗಡ ಹೋರಾಡಿ ಗೆಲ್ಲುವುದು ದುಸ್ತರವೆಂದು ತಿಳಿದು, ಆಬಾದುಷಾ ಪದ್ಮಿನಿಯನ್ನು ವಶಮಾಡಿಕೊಳ್ಳಬೇಕೆಂದು ನೋಡಿದನು. ಆದರೆ ಮೊದಲಿನಲ್ಲಿ ಆತನು ತನ್ನ ಸೈನಿಕರಸಂಗಡ ಚಿತ್ತೂರು ಸಂಸ್ಥಾನದಪ್ರಾಂತ ಭೂಮಿಯನ್ನು ವಶಮಾಡಿಕೊಂಡು, ಅನೇಕ ದಾಸೀಜನರಿಗೆ ದ್ರವ್ಯಾಶೆಯನ್ನು ತೋರಿಸಿ ಅವರು ತನ್ನ ರೂಪವನ್ನೂ, ಐಶ್ವರ್ಯ ಮೊದಲಾದುವುಗಳನ್ನೂ ಪದ್ಮಿನಿಗೆ ತಿಳಿಯಪಡಿಸಿ ಆಕೆಯು ತನಗೆ ವಶವರ್ತಿನಿಯಾಗುವದಕ್ಕೆ ಬೇಕಾದ ಯುಕ್ತಿಗಳನು ಮಾಡುವಹಾಗೆ ಮಾಡಿದನು. ಆದರೆ ಸತೀಮಣಿಯಾದ ಪದ್ಮಿನಿಯ ಹತ್ತರ ಮ್ಲೇಚ್ಛಪ್ರಭುವಿನ ತುಚ್ಛಯುಕ್ತಿಗಳು ಎಷ್ಟುಮಾತ್ರವೂ ಕೆಲಸಕ್ಕೆ ಬಾರದೆ ನಿಷ್ಫಲಗಳಾದವು ಆದಕ್ಕೆ ಬಾದುಷಾ ತುಂಬಾ ಚಿಂತಿಸಿ, ತನಗೆ ಪದ್ಮಿನಿಯ ಮೇಲಿರುವ ದುರುದ್ದೇಶವನ್ನು ಮರೆಯಲಾರದೆ, ರಾಜಪುತ್ರರ ಸಂಗಡ ಯುದ್ಧವನ್ನು ಮಾಡಿ ಪದ್ಮಿನಿಯನ್ನು ಸೆರೆ ಹಿಡಿಯಲು ನಿಶ್ಚಯಿಸಿದನು. ಅಲ್ಲಾವುದ್ದೀನನು ಆ ಸಮಯದಲ್ಲಿ "ಪದ್ಮಿನಿಯನ್ನು ಕೈಹಿಡಿಯದೆ ಹೋದರೆ ಈ ರಾಜಪುತಸ್ಥಾನದಲ್ಲಿಯೇ ಯುದ್ಧವನ್ನು ಮಾಡಿ ಪ್ರಾಣವನ್ನು ಬಿಡುವೆನೆಂದು" ಶಪಥಮಾಡಿಕೊಂಡನು.

ತದನಂತರ ಆತನು ತನ್ನ ಸೈನ್ಯಸಹಿತನಾಗಿ ರಾಜಧಾನಿಯನ್ನು ಮುತ್ತಿಗೆ ಹಾಕಿದನು. ಅಲ್ಲಾವುದ್ದೀನನು ತಮ್ಮ ನಗರವನ್ನು ಮುತ್ತಿಗೆ ಹಾಕಿದ್ದನ್ನು ಕೇಳಿ, ಅಸ

ಮಾನ ಶೌರ್ಯ ಧೈರ್ಯರಾದ ರಜಪೂತರು ಯುದ್ಧಸನ್ನದ್ಧರಾದರು. ಆಗ ಅವರುಗಳೆಲ್ಲರೂ ಭೀಮಸಿಂಹನ ಆಜ್ಞೆಯ ಪ್ರಕಾರ ಹೊರಟು ಪ್ರತಿಪಕ್ಷದವರ ಸಂಗಡ ಘೋರವಾಗಿ ಹೋರಾಡಲು ಪ್ರಾರಭಿಸಿದರು. ಹೀಗೆ ಆ ಉಭಯ ಸೈನ್ಯಗಳಲ್ಲಿರುವ ವೀರರುಗಳು ಕೆಲವು ತಿಂಗಳವರೆಗೂ ಯುದ್ಧವನ್ನು ಮಾಡಿದರು. ಆದರೆ ಆ ಎರಡು ಕಡೆಯವರಲ್ಲಿ ಯಾರೂ ಹಿಂಜರಿದವರಾಗಲಿಲ್ಲ. ರಜಪೂತ ಸರದಾರರು ಅನೇಕರು ಎಷ್ಟು ದೃಢನಿಶ್ಚಯದಿಂದ ಹೋರಾಡಿದರೂ ತುರುಕ ಸೈನ್ಯಗಳು ಶಕ್ತಿಗುಂದದೆ ಇರುವದನ್ನೂ ಇದುವರೆಗೆ ರಜಪುತ್ರರ ಸೈನ್ಯಗಳು ಬಹಳವಾಗಿ ಬಳಲಿ ಇದ್ದುದನ್ನೂ ಕಂಡು ಭೀಮಸಿಂಹನು ತುಂಬ ಚಿಂತಾಕ್ರಾಂತನಾಗಿ ಇದ್ದನು. ಕೊನೆಗೆ ಆತನು ಪ್ರಜಾಕ್ಷಯಕ್ಕೆ ಸಹಿಸಲಾರದೆ ಡಿಲ್ಲೀಶ್ವರನ ಸಂಗಡ ಸಂಧಿಯನ್ನು ಮಾಡಲು ನಿಶ್ಚಯಿಸಿ ಅದಕ್ಕೆ ಕೆಲವರು ಮಂತ್ರಿಗಳನ್ನು ಕಳುಹಿಸಿದನು. ಆದರೆ ಅದು ಕೊನೆಸಾಗಲಿಲ್ಲ. ಸಂಧಿಯನ್ನು ತಿಳಿಸಲುಬಂದವರ ಸಂಗಡ ಅಲ್ಲಾವುದೀನನು ತನಗೆ ಪದ್ಮಿನಿಯು ದೊರಕಿದಹೊರತು ಯುದ್ಧವನ್ನು ನಿಲ್ಲಿಸುವುದಕ್ಕಾಗುವುದಿಲ್ಲವೆಂದು ಸ್ಪಷ್ಟವಾಗಿ ತಿಳಿದನು. ಈ ವಾರ್ತೆಯನ್ನು ಕೇಳಿದ ಕೂಡಲೆ ಶೂರರಾದ ರಾಜಪುತ್ರರೆಲ್ಲರೂ ಕೆಡೆಯನ್ನು ತುಳಿದ ಸರ್ಪಗಳ ಹಾಗೆ ಎದುರುಬಿದ್ದು ತಮ್ಮಗಳ ಪ್ರಾಣಗಳು ಹೋಗುವವರೆಗೂ ಯುದ್ಧವನ್ನು ಮಾಡುತ್ತೇವೆಂದು ವಿಜೃಂಭಿಸಿದರು. ಆಮೇಲೆ ಆ ಎರಡು ಕಡೆಯ ಸೈನಿಕರೂ ಒಬ್ಬರಮೇಲೊಬ್ಬರು ಬಿದ್ದು ಯುದ

ವನ್ನು ಮಾಡುತ್ತಿದ್ದರು. ಹೀಗೆ ಹದಿನೆಂಟು ತಿಂಗಳು ಯುದ್ಧ ನಡೆಯುತ್ತಿತ್ತು. ಆದರೆ ಶೂರರಾದ ರಜಪೂತರು ಬಾದುಷಾ ಸೈನಿಕರನ್ನು ಪಟ್ಟಣದೊಳಕ್ಕೆ ಹೋಗಲಿಸದೆ ಇದ್ದರು. ಅಲ್ಲಾವುದ್ದೀನನು ಅವರ ನಿಶ್ಚಯವನ್ನು ಕಂಡು ರಜಪೂತರನ್ನು ಯುದ್ಧದಿಂದ ಓಡಿಸಿ ಪದ್ಮಿನಿಯನ್ನು ಹಿಡಿಯುವ ಪ್ರಯತ್ನವನ್ನು ಬಿಡುವವನಾದನು. ಯುದ್ಧವನ್ನು ನಿಲ್ಲಿಸಿದರೂ ಪದ್ಮಿನಿಯಲ್ಲಿ ತನಗಿರುವ ವ್ಯಾಮೋಹವು ಆತನನ್ನು ಆ ಊರನ್ನು ದಾಟಿಹೋಗಲಿಸದೆ ಇತ್ತು. ಆದ್ದರಿಂದ ಆತನು ಭೀಮಸಿಂಹನಿಗೆ ಹೀಗೆ ವರ್ತಮಾನವನ್ನು ಕಳುಹಿಸಿದನು---"ನನಗೆ ಪದ್ಮಿನಿಯು ದೊರಕಬೇಕೆಂಬ ಆಶೆಯಿಲ್ಲ. ಆದರೆ ಆಕೆಯ ರೂಪವನ್ನು ನೀವು ನನಗೆ ಒಂದುಸಲ ತೋರಿಸಿದ್ದಾದರೆ ನಾನು ಸೈನ್ಯಸಹಿತನಾಗಿ ಪುನಃ ಡಿಲ್ಲಿಗೆ ಹೋಗವೆನು."

ಈ ವರ್ತಮಾನವನ್ನು ಕೇಳಿ ಸ್ವಲ್ಪ ರೋಷ ಉಂಟಾದರೂ, ಪೌರುಷದಲ್ಲಿ ಕುಂದಕವಿಲ್ಲದ ರಾಜಪುತ್ರರುಗಳೆಲ್ಲರೂ ಅದಕೆ ಒಪ್ಪಿಕೊಂಡರು. ತದನಂತರ ಆ ಸಂಗತಿಯನ್ನು ಭೀಮಸಿಂಹನು ಪದ್ಮಿನಿಗೆ ತಿಳಿಸಲಾಗಿ ಆಕೆಯು ತಾನು ಪ್ರತ್ಯಕ್ಷವಾಗಿ ಆ ಮ್ಲೇಚ್ಛನ ಕಣ್ಣಿಗೆ ಕಾಣಿಸುವುದಿಲ್ಲ.ವೆಂದು ಸ್ಪಷ್ಟವಾಗಿ ತಿಳಿಸಿದಳು. ಅದರಮೇಲೆ ಭೀಮಸಿಂಹನು ಆಕೆಯು ಡಿಲ್ಲೀಶ್ವರನಿಗೆ ಕಾಣಿಸಿಕೊಳ್ಳದಪಕ್ಷದಲ್ಲಿ ರಾಜಪುತ್ರರಿಗೆ ಉಂಟಾಗುವ ಬಾಧೆಗಳನ್ನು ತಿಳಿಸಲಾಗಿ, ಆಕೆಯು ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ಬಾದುಷಾವಿಗೆ ತೋರಿ

ಸಲು ಒಪ್ಪಿಕೊಂಡಳು. ಆಗ "ಪದ್ಮಿನಿಯು ನಿನ್ನ ಕಣ್ಣಿಗೆ ಕಾಣಿಸಿಕೊಳ್ಳಲಾರಳು. ಆದರೆ ಆಕೆಯ ಪ್ರತಿಬಿಂಬವನ್ನು ತೋರಿಸುತ್ತೇನೆಂದು" ಚಾರರಿಂದ ವರ್ತಮಾನವನ್ನು ಅಲ್ಲಾವುದ್ದೀನನಿಗೆ ಹೇಳಿ ಕಳುಹಿಸಿದರು. ಅದರ ಮೇಲೆ ಯುದ್ಧವನ್ನು ನಿಲ್ಲಿಸಿ ನಿಯಮಿತದಿವಸದಲ್ಲಿ ಒಬ್ಬಿಬ್ಬರು ಸೇವಕರ ಸಂಗಡ ಅಲ್ಲಾವುದ್ದೀನನು ಪದ್ಮಿನಿಯನ್ನು ನೋಡುವುದಕ್ಕಾಗಿ ಚಿತ್ತೂರು ಕೋಟೆಯೊಳಕ್ಕೆ ಬಂದನು. ಅಲ್ಲಿ ಭೀಮಸಿಂಹನು ತಕ್ಕ ಮರ್ಯಾದೆಗಳನ್ನು ಮಾಡಿ ಆತನಿಗೆ ದರ್ಪಣದಿಂದ ಪದ್ಮಿನಿಯ ರೂಪವನ್ನು ತೋರಿಸಿದನು. ತಾನು ಕೇಳಿದ್ದಕ್ಕಿಂತಲೂ ವಿಶೇಷ ರೂಪವತಿಯಾಗಿರುವುದನ್ನು ಕಂಡದ್ದರಿಂದ ಬಾದುಷಾವಿನ ಚಿತ್ತಚಾಂಚಲ್ಯವು ಇಮ್ಮಡಿಯಾಯಿತು

ಅದನ್ನು ಮನಸ್ಸಿನಲ್ಲಿ ಅಡಗಿಸಿಕೊಂಡು ಆ ಮ್ಲೇಚ್ಛಪ್ರಭುವು ಪುನಃ ಹೋಗುವಾಗ ತನ್ನ ಕೃತ್ಯಕ್ಕೆ ಪಶ್ಚಾತ್ತಾಪತಪ್ತನಾದಹಾಗೆ ಭೀಮಸಿಂಹನ ಸಂಗಡ ಹೀಗೆಂದನು. "ಭೀಮಸಿಂಹರವರೇ, ನಾನು ಮಾಡಿದ ಅಪರಾಧಗಳನ್ನು ಕ್ಷಮಿಸಬೇಕು. ಇಂದಿನಾರಭ್ಯ ನಾನು ಚಿತ್ತೂರು ಸಂಸ್ಥಾನಿಕರ ಸಖ್ಯವನ್ನು ಬೆಳೆಸಬೇಕೆಂದು ನೆನಸಿ ಇದ್ದೇನೆ. ಇದುವರೆಗೂ ನಿಮ್ಮ ಯೋಗ್ಯತೆಯು ತಿಳಿಯಲಿಲ್ಲವಾದ್ದರಿಂದ ನಾನು ವೈರವನ್ನು ಬೆಳಸಿದೆನು. ಆದರೆ ಈ ದಿನ ನಿಮ್ಮ ಯೋಗ್ಯತೆಯನ್ನು ನನ್ನ ಕಣ್ಣಾರ ನೋಡಲಾಗಿ ನಿಮ್ಮಂಥ ಮಿತ್ರರು ದೊರಕುವುದು ನನಗೆ ತುಂಬಾ ಶ್ರೇಯಸ್ಕರವೆಂದು ತೋರುತ್ತದೆ. ಆದ್ದರಿಂದ ಈ ಪ್ರಥಮದಿವಸದಲ್ಲಿಯೇನೇ ತಾವು ನನ್ನ ಬಿಡಿದಿಗೆ ದಯ

ಮಾಡಿ ನಾನು ಮಾಡುವ ಪೂಜೆಯನ್ನು ಅಂಗೀಕರಿಸುವಿರೆಂದು ನಂಬುತ್ತೇನೆ. ಈ ನನ್ನ ಅಲ್ಪಬಿನ್ನಪವನ್ನು ಅಂಗೀಕರಿಸದೆ ತೀರದು.'' ಬಾದುಷಾವಿನ ನಮ್ರತೆಯನ್ನು ನೋಡಿ, ಆತನ ಮಾತುಗಳನ್ನು ನಂಬಿ ಭೀಮಸಿಂಹನು ಮಿತಪರಿವಾರದೊಡನೆ ಆತನ ಶಿಬಿರಕ್ಕೆ ಪ್ರಯಾಣವಾದನು. ಅಲ್ಲಾವುದ್ದೀನನು ತುಂಬ ದುರ್ಮಾರ್ಗನಾದ್ದರಿಂದ ರಾಜನನ್ನು ನಂಬಿಸಿ, ತನ್ನ ಸಂಗಡ ಕರೆದುಕೊಂಡು ಬಂದು ತನ್ನ ಶಿಬಿರದ ಸಮೀಪದಲ್ಲಿ ಆತನನ್ನು ಸೈನ್ಯದೊಳಕ್ಕೆ ಸೇರಿಸಿ ಕೈದುಮಾಡುವಹಾಗೆ ಮಾಡಿದನು. ರಾಜನು ಕೈಗೆ ಸಿಕ್ಕಿದ್ದರಿಂದ ವಿಶೇಷವಾಗಿ ಉಬ್ಬಿದವನಾಗಿ ಅಲ್ಲಾವುದ್ದೀನನು ಚಿತ್ತೂರಿಗೆ ಹೀಗೆ ವರ್ತಮಾನವನ್ನು ಕಳುಹಿಸಿದನು–"ಪದ್ಮಿನಿಯು ನನ್ನ ಹತ್ತಿರಕ್ಕೆ ಬಾರದ ಪಕ್ಷದಲ್ಲಿ ಭೀಮಸಿಂಹನ ಪ್ರಾಣವನ್ನು ತೆಗೆದು ಪುನಃ ರಾಜಪುತ್ರರನ್ನು ಸಂಹರಿಸುವೆನು." ಈ ಸಂಗತಿಯನ್ನು ಕೇಳಿ ರಾಜಪುತ್ರರೆಲ್ಲರೂ ಏನು ಮಾಡುವುದಕ್ಕೂ ತೋರದೆ ತುಂಬ ವಿಚಾರವುಳ್ಳವರಾಗಿದ್ದರು. ರಾಜನಾದ ಲಕ್ಷ್ಮಣಸಿಂಹನು ಬಾಲನಾದ್ದರಿಂದಲೂ, ಭೀಮಸಿಂಹನ ಹನ್ನೆರಡುಜನ ಪುತ್ರರುಗಳೂ ಅಲ್ಪವಯಸ್ಕರಾಗಿದ್ದುದರಿಂದಲೂ ಇಂಥಾ ಸಮಯದಲ್ಲಿ ತಕ್ಕ ಉಪಾಯವನ್ನು ಯೋಚಿಸುವವರು ಇಲ್ಲದೆ ಹೋದರು. ಆದರೆ ಪದ್ಮಿನಿಯು ಮಾತ್ರ ಆಗ ಇತರ ಸ್ತ್ರೀಯರುಗಳ ಹಾಗೆ ದುಃಖ ಪಡುತ್ತ ಕೂತುಕೊಂಡಿರದೆ ತುಂಬ ಧೈರ್ಯವನ್ನು ಅವಲಂಬಿಸಿ, ಪತಿಯನ್ನು ಬಿಡಿಸುವ ಉಪಾಯವನ್ನು ಯೋಚಿಸುತ್ತಿದ್ದಳು. ಆ ಸಮಯಕ್ಕೆ ಸರಿಯಾಗಿ

ಯೇನೋ ಕೆಲಸದ ಮೇಲೆ ಆಕೆಯ ಸೋದರನಾದ ಗೋರ
ಸಿಂಹನೆಂಬುವನೂ, ಆತನಮಗನಾದ ಬಾದಲನೆಂಬ ವೀರನೂ
ಅಲ್ಲಿಗೆ ಬಂದರು. ಆಕೆಯು ಅವರ ಸಂಗಡ ಯೋಚಿಸಿ ತುಂಬ
ವಿಚಿತ್ರವಾದ ಉಪಾಯವನ್ನು ಹುಡುಕಿದಳು. ಪದ್ಮಿನಿಯು ಅಲ್ಲಾ
ವುದ್ದೀನನಿಗೆ ಹೀಗೆ ವರ್ತಮಾನವನ್ನು ಕಳುಹಿಸಿದಳು-"ನೀವು
ಭೀಮಸಿಂಹನನ್ನು ಬಿಟ್ಟು ಡಿಲ್ಲಿಗೆ ಹೋಗುವ ಪಕ್ಷದಲ್ಲಿ ನಾನು
ತಕ್ಕ ದಾಸಿಯರ ಸಂಗಡ ಅಲ್ಲಿಗೆ ಬರುವೆನು. ಆದರೆ ನನ್ನ
ದಾಸೀ ಜನಗಳ ಕಡೆಯುವರಿಗೂ, ರಾಣೀ ವಾಸಕ್ಕೂ ನಿಮ್ಮ
ಸೈನಿಕರು ಭಂಗವನ್ನು ಮಾಡದ ಹಾಗೆ ಕಟ್ಟುಕಾಯಿಗೆ
ಗಳನ್ನು ಮಾಡಬೇಕು." ಪದ್ಮಿನಿಯು ತಿಳಿಸಿದ ವಾರ್ತೆಗಳನ್ನು
ಕೇಳಿ ಅಲ್ಲಾವುದ್ದೀನನು ತುಂಬ ಆನಂದಭರಿತನಾದನು. ಆಗ
ಆತನು ಆಕೆ ಹೇಳಿದಪ್ರಕಾರವೇ ಒಪ್ಪಿಕೊಂಡು ಅಕೆಗೆ
ಜಾಗ್ರತೆಯಾಗಿ ಬರುವಹಾಗೆ ಉತ್ತರವನ್ನು ಬರೆದು ಕಳು
ಹಿಸಿದನು. ಬಾದುಷಾಕಡೆಯಿಂದ ತನ್ನ ಮಾತುಗಳಿಗೆ ಅಂಗೀ
ಕಾರ ಬಂದದ್ದನ್ನು ಕೇಳಿ ಪದ್ಮಿನಿಯು ತಾನು ಪ್ರಯಾಣವಾ
ದಳು. ಆಕೆಯುಸಂಗಡ ಬರುವುದಕ್ಕೆ ೭೦೦ ಮೇನಾಗಳು ಸಿದ್ಧ
ವಾದವು. ಒಂದೊಂದು ಮೇನಾದಲ್ಲಿ ೩ ಜನ ಸಿಪಾಯಿಗಳು ಆ
ಯುಧಹಸ್ತರಾಗಿ ಕೂತುಕೊಂಡಿದ್ದರು. ಪ್ರತಿಮೇನಾವಿಗೂ
೬ ಜನ ಗುಪ್ತಾಯುಧರಾದ ವೀರರುಗಳೂ ಆ ಆಂದಳಗ
ಳನ್ನು ಹೊರುತ್ತಿದ್ದರು. ಪದ್ಮಿನಿಯು ತನ್ನ ಸೈನ್ಯಕ್ಕೂ, ತನ
ಗೂ ಸಹಾಯಕ್ಕೆ ಗೋರಸಿಂಹನನ್ನೂ, ಆತನ ಪುತ್ರನನ್ನೂ
ತನ್ನ ಸಂಗಡ ಕರೆದುಕೊಂಡು ಹೊರಟಳು ಹೀಗೆ ಇವ

ರೆಲ್ಲರೂ ತುರುಕರ ಶಿಬಿರವನ್ನು ಸಮೀಪಿಸಿ ಆ ಬಾದುಷಾ ಆಜ್ಞೆಯಪ್ರಕಾರ ಆ ಮೇನಾಗಳನ್ನೆಲ್ಲಾ ನಿರಾತಂಕವಾಗಿ ಆ ಶಿಬಿರದೊಳಕ್ಕೆ ತೆಗೆದುಕೊಂಡು ಹೋದರು. ತದನಂತರ ಪದ್ಮಿನಿಯು ಭೀಮಸಿಂಹನನ್ನು ಒಂದುಸಲ ನೋಡುವೆನೆಂದು ಬಾದುಷಾವಿಗೆ ತಿಳಿಸಿ ಭೀಮಸಿಂಹನನ್ನು ಕೈದುಮಾಡಿದ್ದ ಸ್ಥಳಕ್ಕೆ ತನ್ನ ಮೇನಾವನ್ನು ಹೊರಿಸಿಕೊಂಡು ಹೋದಳು. ಆಗ ಸ್ತ್ರೀಯರ ಹಾಗ್ ಇದ್ದ ಆ ಗುಪ್ತಸೈನ್ಯವೆಲ್ಲವೂ ತನ್ನ ನಿಜಸ್ವರೂಪವನ್ನು ತೋರಿಸಿ ಮ್ಲೇಚ್ಛರ ಸೈನ್ಯವನ್ನು ಧ್ವಸ್ಯ ಹೊಂದಿಸುವವರಾದರು. ಭೀಮಸಿಂಹನು ಅದೆಲ್ಲವೂ ಏನೆಂದು ಕೇಳುವುದರೊಳಗಾಗಿ ಪದ್ಮಿನಿಯು ಆತನನ್ನು ಜಾಗ್ರತೆ ಪಡಿಸಿ ಸಿದ್ಧಪಡಿಸಿ ತಂದಿದ್ದ ಅಶ್ವಗಳ ಮೇಲೆ ತಾನೂ, ತನ್ನ ಪತಿಯೂ ಹತ್ತಿ ಆ ಸಂಗ್ರಾಮದ ಗಲಿಬಿಲಿಯಿಂದ ತಪ್ಪಿಸಿಕೊಂಡು, ಕ್ಷಣದಲ್ಲಿ ಚಿತ್ತೂರನ್ನು ಪ್ರವೇಶಿಸಿದಳು. ಇಲ್ಲಿ ಗೋರಸಿಂಹನು ಸೈನ್ಯಾಧಿಪತ್ಯವನ್ನು ಸ್ವೀಕರಿಸಿ ಆ ತುರುಕರನ್ನೂ ಓಡಿಸಿದನು. ಆದರೆ ಅರ್ಜುನತುಲ್ಯನಾದ ಗೋರಸಿಂಹನೂ, ಆತನ ಪುತ್ರನಾದ ಬಾದಲನೂ ಆಯುದ್ಧದಲ್ಲಿ ಮೃತರಾದ್ದರಿಂದ ರಜಪೂತರಿಗೆ ವಿಜಯಾನಂದವು ಅಷ್ಟು ರುಚಿಸದೆ ಇತ್ತು. ಅಲ್ಲಾವುದ್ದೀನನು ತನ್ನ ಪರಾಜಯಕ್ಕೆ "ಬಿಸಿಮಿಲ್ಲಾ" ಎನ್ನುತ್ತ ತನ್ನ ಸೈನಿಕರ ಸಂಗಡ ಡಿಲ್ಲೀಮಾರ್ಗವನ್ನು ಹಿಡಿದು ಹೋದನು. ಆ ಯುದ್ಧಾನಂತರದಲ್ಲಿ ಮತ್ತೆ ಕೆಲವುದಿನಗಳಿಗೆ ಡಿಲ್ಲೀಪತಿಯು ವಿಶೇಷ ಸೈನ್ಯದಿಂದ ಚಿತ್ತೂರಿನಮೇಲೆ ದಂಡೆತ್ತಿ ಹೊರಟನು. ಈ ಸಲ ಚಿತ್ತೂರಿನಲ್ಲಿ

ಶೂರರು ಇಲ್ಲದ್ದರಿಂದ ರಾಜಪುತ್ರರಿಗೆ ವಿಜಯಾಶೆಯು ಅಷ್ಟು ಇಲ್ಲದೆ ಇತ್ತು. ಆ ವೀರರು ಅಷ್ಟಕ್ಕೆ ನಿರಾಶೆಯನ್ನು ಹೊಂದಿ ಸುಮ್ಮನಿರದೆ ತಮ್ಮ ಪ್ರಾಣಗಳಮೇಲೆ ಆಶೆಯನ್ನು ತ್ಯಜಿಸಿ ಶತ್ರುಗಳ ಸಂಗಡ ಹೋರಲು ತೊಡಗಿದರು. ಅಂಥಾ ಸಮಯ ದಲ್ಲಿ ಒಂದು ಕಾರಣದಿಂದ ಆ ರಾಜಪೂತರಿಗೆ ಜಯವು ದೊರಕಲಾರದೆಂದು ನಿಶ್ಚಯವು ತೋರಿತು. ಅದು ಯಾವುದೆಂ ದರೆ;-ಆ ಯುದ್ಧವು ನಡೆಯುತ್ತಿರುವಾಗ ಒಂದು ದಿನ ರಾತ್ರಿ ಗ್ರಾಮದೇವತೆಯು ಭೀಮಸಿಂಹನ ಸ್ವಪ್ನದಲ್ಲಿ ಬಂದು “ನನಗೆ ಅತಿ ದಾಹವಾಗಿರವದು. ಈ ದಾಹವು ಹನ್ನೆರಡು ರಾಜಪುತ್ರರ ರಕ್ತವನ್ನು ಪಾನಮಾಡಿದ ಹೊರತು ಅಡಗುವದಿಲ್ಲ” ವೆಂದು ಹೇಳಿದಳಂತೆ. ಅದೇ ಪ್ರಕಾರ ಭೀಮಸಿಂಹನ ಹನ್ನೆರಡು ಜನ ಪುತ್ರರೂ ಯುದ್ಧದಲ್ಲಿ ಶತ್ರುಗಳಿಂದ ಹತರಾದರು. ಅಷ್ಟಾದರೂ ರಾಜಪುತ್ರರು ಧೈರ್ಯವನ್ನು ಬಿಡದೆ ಪುರದಲ್ಲಿ ರುವ ಪುರುಷರುಗಳೆಲ್ಲರೂ ವೈರಿಗಳ ಸಂಗಡ ಹೋರಾಡಿ ವೀರಸ್ವರ್ಗದ ಸುಖದಲ್ಲಿ ಸೇರಲು ನಿಶ್ಚಯಿಸಿದರು. ಆಗ ಅವ ರೆಲ್ಲರೂ ಸಿಸೋದಿಯಾ ವಂಶವು ನಾಶವಾಗುವದಕ್ಕೆ ಭೀಮ ಸಿಂಹನ ಕನಿಷ್ಠಪುತ್ರನನ್ನು ಒಬ್ಬ ದಾಸಿಯಕೈಗೆ ಕೊಟ್ಟು ಸಮೀಪದಲ್ಲಿರುವ ಅರಣ್ಯಕ್ಕೆ ಕಳುಹಿಸಿದರು. ಕೊನೆಗೆ ಅವ ರೆಲ್ಲರೂ ಆ ಕೂಸು ರಾಜವಂಶಕ್ಕೆ ಅಂಕುರವಾಗುವದೆಂದು ನಿಶ್ಚಯಿಸಿಕೊಂಡು ಸಮರರಂಗಕ್ಕೆ ಹೊರಟರು. ಆ ದಿನ ಆ ರಾಜಪೂತರ ಶೌರ್ಯಾಗ್ನಿಯು ಮತ್ತಷ್ಟು ಪ್ರಜ್ವಲಿಸಲಾಗಿ, ಅವರು ಶತ್ರುಗಳಿಗೆ ತುಂಬಾ ಅಸಾಧ್ಯರೆಂದು ತೋರಿದರು.

ಆದರೆ ವಿಸ್ತಾರವಾದ ಮ್ಲೇಚ್ಛರ ಸೈನ್ಯದಮುಂದೆ ಈ ರಾಜ ಪೂತರ ಸ್ವಲ್ಪ ಸೈನ್ಯಕ್ಕೆ ಹೇಗೆ ಜಯವು ದೊರಕುವುದು! ಆ ಸಾಯಂಕಾಲದೊಳಗಾಗಿ ಕ್ಷತ್ರಿಯ ವೀರರೆಲ್ಲರೂ ವೀರಸ್ವರ್ಗವನ್ನು ಹೊಂದಲಾಗಿ, ಜಯಲಕ್ಷ್ಮಿಯು ಅಲ್ಲಾವುದೀನನನ್ನೇ ಹೊಂದಿದಳು. ಭೀಮಸಿಂಹನ ಸಂಗಡ ಸಕಲ ರಾಜಪುತ್ರರುಗಳೂ ಯುದ್ಧದಲ್ಲಿ ಮಡಿದದ್ದು ನಗರದಲ್ಲಿರುವ ಸ್ತ್ರೀಯರುಗಳಿಗೆ ತಿಳಿಯಲಾಗಿ, ಪದ್ಮಿನಿಯೂ, ಸಕಲ ರಾಜಪೂತರ ಭಾರ್ಯೆಯರೂ ಪಾತಿವ್ರತ್ಯಸಂರಕ್ಷಣಕ್ಕಾಗಿ ಅಗ್ನಿಪ್ರವೇಶವನ್ನು ಮಾಡಲು ನಿಶ್ಚಯಿಸಿಕೊಂಡರು. ಹೀಗೆ ಅವರು ಕೃತನಿಶ್ಚಯರಾಗಿ ಒಂದು ದೊಡ್ಡ ಚಿತಿಯನ್ನು ಮಾಡಿ ಅದಕ್ಕೆ ಅಗ್ನಿಯನ್ನು ಮುಟ್ಟಿಸಿದರು. ಅದರ ಮೇಲೆ ಪದ್ಮಿನಿಯು ತಾನು ಮುಂದಾಗಿ ಅಗ್ನಿಯಲ್ಲಿ ಧುಮುಕಲಾಗಿ ಎಲ್ಲಾ ಸ್ತ್ರೀಯರುಗಳೂ ಧುಮುಕಿದರು. (ಈ ಅಗ್ನಿಪ್ರವೇಶವನ್ನೇ ರಾಜಪುತ್ರರು "ಜೋಹಾರ್" ಅಥವಾ ಜಹರವ್ರತವೆಂದು ಹೇಳುವರು) ಬಾದುಷಾವಿಜಯಾನಂದದಿಂದ ಪುರಪ್ರವೇಶವನ್ನು ಮಾಡಲಾಗಿ, ಆ ಗ್ರಾಮವೆಲ್ಲವೂ ಚಿತಾಮಯವಾಗಿ ಇತ್ತು, ಆಗ ತಾನು ಇಷ್ಟು ಪ್ರಯತ್ನವನ್ನು ಮಾಡಿ ಕೈಹಿಡಿಯಬೇಕೆಂದಿದ್ದ ಪದ್ಮಿನಿಯ ದೇಹವು ಭಸ್ಮವಾಗಿರುವುದನ್ನು ನೋಡಿ ಅಲ್ಲಾವುದೀನನು ತುಂಬಾ ವ್ಯಸನಪಟ್ಟನು. ಯುದ್ಧಕ್ಕೆ ಪ್ರಯಾಣವಾದಾಗ ಭೀಮಸಿಂಹನೇ ಸ್ತ್ರೀಯರೆಲ್ಲರನ್ನೂ ಒಂದು ಗುಹೆಯೊಳಕ್ಕೆ ಸೇರಿಸಿ ಆ ಗುಹೆಯನ್ನು ಮುಚ್ಚಿ ಗುಹಾದ್ವಾರಕ್ಕೆ ಅಗ್ನಿಯನ್ನು ಹತ್ತಿಸಿದನೆಂದು ಕೆಲವರು ಚರಿತ್ರಕಾರರು ಬರೆದಿರುವರು.

## ೩. ಕೃಷ್ಣಾಕುಮಾರಿ.

---

ಈ ವೀರಬಾಲೆಯು ಮೇವಾಡ ದೇಶಾಧಿಪತಿಯಾದ ಮಹಾರಾಣಾ ಭೀಮಸಿಂಹನ ಮಗಳು. ಈಕೆಯು ೧೭೯೨ ನೆಯ ವರ್ಷದಲ್ಲಿ ಮೇವಾಡದೇಶದ ರಾಜಧಾನಿಯಾದ ಉದಯ ಪುರದಲ್ಲಿ ಜನಿಸಿದಳು. ಜಾತಕರ್ಮಾದಿ ಸಂಸ್ಕಾರಗಳು ಜರು ಗಿದಮೇಲೆ ಆ ಬಾಲೆಗೆ ಕೃಷ್ಣಾ ಎಂದು ನಾಮಕರಣಮಾ ಡಿದರು. ಕೃಷ್ಣೆಯು ಮೇಲೆ ಆಕೆಯ ಜನನಿಗೆ ಅಧಿಕ ಪ್ರೀ ತಿಯಾದ್ದರಿಂದ ಆಕೆಯು ತುಂಬಾ ಪ್ರೀತಿಯಿಂದ ಬೆಳಸುತ್ತಿ ದ್ದಳು. ಕುಮಾರಿಯು ಅತ್ಯಂತ ರೂಪವತಿಯಾಗಿದ್ದಳು. ಆಕೆಯು ಬಾಲ್ಯಾರಂಭದಿಂದ ಆಕೆಯಲ್ಲಿನ ಅನೇಕ ಸದ್ಗುಣ ಗಳಿಂದ ವಿಶೇಷ ಕೀರ್ತಿಯನ್ನು ಹೊಂದಿದಳು. ಹೀಗಿರಲಾಗಿ ಕೆಲವು ಸಂವತ್ಸರಗಳಿಗೆ ಆ ಬಾಲೆಯು ವಿವಾಹ ಯೋಗ್ಯ ಳಾದಳು. ಆದ್ದರಿಂದ ರಾಣಿಗೆ ಮಗಳ ವಿವಾಹದ ಯೋಚನೆ ವಿಶೇಷವಾಯಿತು. ಆಕೆಯ ಅಸಮಾನರೂಪವೂ, ಮೃದು ಮಧುರ ಭಾಷಣವೂ ಅದುವರೆಗೇನೇ ದೇಶವೆಲ್ಲವೂ ವ್ಯಾಪಿ ಸಿತ್ತು. ಆದ್ದರಿಂದ ಜನಗಳು ಆಕೆಯನ್ನು ರಾಜಸ್ಥಾನವೆಂಬ ಸರಸ್ಸಿನಲ್ಲಿ ಅಪೂರ್ವನಾದ ಪದ್ಮವೆಂದು ಹೊಗಳುತ್ತಿದ್ದರು. ಇಂಥಾ ಕನ್ಯಾರತ್ನವನ್ನು ಯಾರಿಗೆ ಕೊಡಬೇಕೆಂದು ಭೀಮ ರಾಣಾ ತುಂಬಾ ವಿಚಾರಸಾಗರದಲ್ಲಿ ಮುಳುಗಿದನು. ಆತ ನಿಗೆ ಇಂಥ ಚಿಂತೆಯು ಉಂಟಾಗುವುದಕ್ಕೆ ಒಂದು ಕಾರಣ

ಉಂಟು. ಆ ಕಾಲದಲ್ಲಿ ಆ ರಾಜಪೂತಸ್ಥಾನದಲ್ಲಿದ್ದ ರಾಜರ ಲ್ಲೆಲ್ಲಾ ಉದಯಪುರದ ರಾಣಾಗಳು ಶ್ರೇಷ್ಠ ಕುಲೀನರೆಂದು ಎಣಿಸಲ್ಪಡುತ್ತಿದ್ದರು. ತಮಗಿರತಲೂ ಉಚ್ಚವಂಶೀಯರಿಗೆ ಕನ್ಯೆಯನ್ನು ಕೊಟ್ಟರೆ ಸರಿ. ಇಲ್ಲದಿದ್ದರೆ ರಜಪೂತರಲ್ಲಿ ತುಂಬ ಅವಮಾನಕರವಾಗಿರುವುದು. ಆದ್ದರಿಂದ ರಾಣಾರ ವರು ಸಮಾನವಂಶೀಯನನ್ನು ಹುಡುಕುತ್ತಲಿದ್ದರು. ಆದರೆ ಅಂಥ ವರನಿಗೆ ವಿದ್ಯಾಗುಣಗಳು ಸರಿಪಡದೆ ಇದ್ದುವು. ವಿದ್ಯಾಗುಣ ಐಶ್ವರ್ಯಗಳುಳ್ಳವನನ್ನು ಹುಡುಕಿದ್ದಾದರೆ ಅವನು ಕುಲೀನನು ಅಲ್ಲದೆ ಹೋಗುತ್ತಿದ್ದನು. ಇದರಿಂದ ಕನ್ಯೆ ಯನ್ನು ಯಾರಿಗೆ ಕೊಡುವುದಕ್ಕೂ ನಿಶ್ಚಯಿಸಲಾರದೆ ಕೊನೆಗೆ ಮಾರ್ವಾಡಾ ದೇಶದ ರಾಣಾವಾದ ಭೀಮಸಿಂಹನಿಗೆ ಕನ್ಯೆ ಯನ್ನು ಕೊಡಲು ನಿಶ್ಚಯಿಸಿದನು. ಆದರೆ ಪ್ರಾರಬ್ಧವಶ ದಿಂದ ಅಲ್ಪಕಾಲದಲ್ಲಿಯೆ ಮಾರ್ವಾಡಾ ಭೀಮಸಿಂಹನು ಸ್ವ ರ್ಗಸ್ಥನಾದನು.

ತದನಂತರ ಜಯಪುರಾಧೀಶ್ವರನಾದ ರಾಣಾಜಯ ಸಿಂಹನು ಕೃಷ್ಣಾ ಕುಮಾರಿಯನ್ನು ತನಗೆ ಕೊಡು ಎಂದು ಕೇಳಲು ಒಬ್ಬ ದೂತನನ್ನು ಕಳುಹಿಸಿದನು. ಉ ದಯಪುರಾಧೀಶ್ವರನೂ ಅದಕ್ಕೆ ಸಮ್ಮತಿಸಿ ಕನ್ಯೆಯನ್ನು ಜಯಸಿಂಹನಿಗೆ ಕೊಡುವೆನೆಂದು ಹೇಳಿದನು. ಇಷ್ಟರಲ್ಲಿ ಮಾರ್ವಾಡದೇಶದ ಸಿಂಹಾಸನವನ್ನು ಹತ್ತಿದ್ದ ರಾಣಾಮಾನಸಿಂ ಹನು ಭೀಮಸಿಂಹನಿಗೆ ಹೀಗೆ ಹೇಳಿ ಕಳುಹಿಸಿದನು, "ಇದುವ

ರೆಗೆಈ ಸಿಂಹಾಸನದಮೇಲೆ ಇರುವವರಿಗೆ ಕನೆ-ಯನ್ನು ಕೊಡಲು ನಿಶ್ಚಯಿಸಿದ್ದರಿ. ವಿಧಿವಶನಾದ ಭೀಮಸಿಂಹನು ಕಾಲ ವರ್ಶವನ್ನು ಹೊಂದಿದನು. ಆದರೂ ಈ ಕನ್ನಿಕೆಯು ಈ ಸಿಂಹಾಸನಕ್ಕೆ ವಾಗ್ದತ್ತೆಳಾಗಿರುವಳು. ಆದ್ದರಿಂದ ನನಗೆ ಕೊಡಬೇಕು." ಇದಕ್ಕೆ ಮಾರ್ವಾಡ ರಾಣಾದೂತನ ಸಂಗಡ "ನಿಮ್ಮರಾಜನಿಗೆ ನನ್ನ ಮಗಳನ್ನು ಕೊಡುವುದಿಲ್ಲವೆಂದು" ಸ್ಪಷ್ಟವಾಗಿ ಹೇಳಿ ಕಳುಹಿಸಿದನು. ಆದ್ದರಿಂದ ಮಾರ್ವಾಡ ದೇಶಕ್ಕೂ, ಮೇವಾಡದೇಶಕ್ಕೂ ವೈರವು ಸಂಪ್ರಾಪ್ತವಾಯಿತು. ಆ ಯೆರಡು ದೇಶಗಳಲ್ಲಿಯೂ ಸಂಗ್ರಾಮ ಸನ್ನಾಹಗಳು ನಡೆ ಯುತ್ತಲಿದ್ದವು.

ಆ ಸಮಯದಲ್ಲಿ ಗ್ವಾಲಿಯರು ರಾಜನಾದ ಸಿಂಧೇ ಜಯಪುರಾಧೀಶ್ವರನ ಮೇಲೆ ತುಂಬ ವೈರವುಳ್ಳವನಾಗಿ, ಭೀಮ ಸಿಂಹನಿಗೆ ಹೀಗೆ ವರ್ತಮಾನವನ್ನು ಕಳುಹಿಸಿದನು. "ಕೃಷ್ಣಾಕುಮಾರಿಯನ್ನು ಜಯಪುರದ ರಾಣಾವಿಗೆ ಕೊಟ್ಟ ಪಕ್ಷದಲ್ಲಿ ನಾನು ಮಾನಸಿಂಹನಿಗೆ ಜೊತೆಯಾಗಿ ಹೋಗಿ ನಿನ್ನಸಂಗಡ ಯುದ್ಧವನ್ನು ಮಾಡುತ್ತೇನೆ." ಈ ವಾರ್ತೆ ಯನ್ನು ಕೇಳಿದ ಮಾತ್ರದಿಂದಲೇ ಭೀಮಸಿಂಹನು ತನ್ನ ನಿಶ್ಚಯವನ್ನು ಬಿಡದೆ ಇದ್ದನು. ತನ್ನ ಮಾತನ್ನು ಉದಯ ಪುರದ ರಾಣಾ ಲಕ್ಷ್ಯಮಾಡದೆ ಇರುವದನ್ನು ಕಂಡು ಸಿಂಧೆ ತುಂಬಾ ಕೋಪಿಸಿ ಯುದ್ಧಸನ್ನಾಹದಿಂದ ಹೊರಟು ಉದ ಯಪುರವನು ಸಮೀಪಿಸಿದನು. ಸಿಂಧೇ ಉದಯಪುರ

ಪ್ರಾಂತ್ಯವನ್ನು ಸೇರಿದ ಕೆಲವು ದಿನಗಳಿಗೆ ಭೀಮಸಿಂಹನೂ ಸಿಂಧೆಯೂ ಒಂದು ದೇವಾಲಯದಲ್ಲಿ ಸೇರಿ ಏನೋ ಆಲೋಚಿಸಿ, ಜಯಸಿಂಹನಿಗೆ ಕನ್ಯೆಯನ್ನು ಕೊಡುವುದಿಲ್ಲವೆಂದು ಭೀಮಸಿಂಹನು ವರ್ತಮಾನವನ್ನು ಕಳುಹಿಸಿದನು. ಜಯಪುರಾಧಿಪತಿಯು ತನ್ನ ಆಶೆಯೆಲ್ಲಾ ನಿರಾಶೆಯಾದ್ದರಿಂದ ತುಂಬಾ ಕೋಪಿಸಿ ಮಾನಸಿಂಹನ ಸಂಗಡ ಯುದ್ಧವನ್ನು ಮಾಡುವದಕ್ಕಾಗಿ ಸೈನ್ಯವನ್ನು ಸಿದ್ಧಮಾಡಲು ಆಜ್ಞಾಪಿಸಿದನು ಮಾನಸಿಂಹನೂ ಯುದ್ಧಕ್ಕೆ ಕಾಲುಕೆರೆಯುತಲೇ ಇದ್ದನು. ಆತನ ಶತ್ರುಗಳು ಕೆಲವರು ಲಕ್ಷದ ಇಪ್ಪತ್ತುಸಾವಿರ ಸೈನ್ಯವನ್ನು ಜೊತೆಗೊಳಿಸಿ ಜಯಸಿಂಹನಿಗೆ ಸಹಾಯವಾದರು. ಆಗ ಆ ರಾಜರಿಬ್ಬರಿಗೂ ಪರ್ವತಶಿಖರವೆಂಬ ಸ್ಥಳದಲ್ಲಿ ಘೋರಸಂಗ್ರಾಮವು ಜರುಗಿತು. ಆ ಯುದ್ಧದಲ್ಲಿ ಮಾನಸಿಂಹನ ಸೈನಿಕರನೇಕರು ಜಯಸಿಂಹನ ಸಂಗಡ ಬೆರೆದಿದ್ದರಿಂದ ಮಾನಸಿಂಹನು ಯುದ್ಧದಿಂದ ಪಲಾಯಿತನಾದನು. ಹೀಗೆ ಓಡಿ ಹೋಗಿ ಆತನು ಯೋಧಗಡ ಎಂಬ ದುರ್ಗದಲ್ಲಿ ಅಡಗಿ ಇದ್ದನು. ಜಯಸಿಂಹನ ಸೇನೆಯು ಯೋಧಗಡವನ್ನು ಮುತ್ತಿಗೆ ಹಾಕಿ ಭೇದಿಸಲು ಯತ್ನಿಸಿತು. ಆದರೆ ಆ ದುರ್ಗವು ಅಭೇದ್ಯವಾದ್ದರಿಂದ ಅವರು ಅದನ್ನು ಭೇದಿಸಲಾರದೆ ಹೊರಟು ಹೋದರು.

ಈ ಯುದ್ಧದಲ್ಲಿ ಜಯಸಿಂಹನ ಸೈನ್ಯವು ತುಂಬಾ ನಾಶವನ್ನು ಹೊಂದಿತು. ಆದರೆ ಜಯಪುರಾಧೀ

ಶ್ವರನು ತನ್ನ ಪುರಕ್ಕೆ ಓಡಿಹೋದನು. ಮಾನಸಿಂಹನ ಶತ್ರುವಾದ ರಾಜನೊಬ್ಬನು ತನ್ನ ಸೈನ್ಯದ ನವಾಬ್‌ಅಮಿರ್ ಖಾನನೆಂಬ ಮ್ಲೇಚ್ಛನಿಂದ ಕೊಲ್ಲಲ್ಪಟ್ಟನು. ಈ ವಿಶ್ವಾಸ ಘಾತಕನಾದ ತುರುಕನೇ ಕೊನೆಗೆ ಅನೇಕ ಯುಕ್ತಿಗಳಿಂದ ಉದಯಪುರದ ರಾಣಾವಿಗೆ ಮುಖ್ಯಸ್ನೇಹಿತನಾಗಿ ಅಜಿತಸಿಂಹ ನೆಂಬುವನನ್ನು ಕೃಷ್ಣಾಕುಮಾರಿಯ ತಂದೆಯ ಹತ್ತಿರ ಸೇವ ಕನನ್ನಾಗಿ ಇಟ್ಟನು. ಇಷ್ಟು ಸಂಗ್ರಾಮವಾದರೂ ಜಯಸಿಂಹ ಮಾನಸಿಂಹರಿಗೆ ಇನ್ನೂ ಯುದ್ಧದಲ್ಲಿ ಇಚ್ಛೆಯು ತಗ್ಗದೆ ಇತ್ತು. ಆದ್ದರಿಂದ ಅವರಿಬ್ಬರೂ ದಳಗಳ ಸಂಗಡ ಉದಯ ಪುರಕ್ಕೆ ಬರುತ್ತಿದ್ದರು. ಆದ್ದರಿಂದ ಆ ಸಂಗತಿಯನ್ನು ಕೇಳಿ ಭೀಮಸಿಂಹರಾಣಾ ತುಂಬ ಚಿಂತೆಯಿಂದ ಆ ಉಭಯರನ್ನೂ ಸಮಾಧಾನಪಡಿಸುವ ಉಪಾಯವನ್ನು ವಿಚಾರಿಸುತ್ತಲಿದ್ದನು. ಆತನಿಗೆ ಏನೂ ತೋರದೆ ಅಮಿರ್‌ಖಾನನ್ನು ಏಕಾಂತವಾಗಿ ಕರೆದು ಆಲೋಚನೆಯನ್ನು ಕೇಳಿದನು. ಆಗ ಆ ದುಷ್ಟನು ಕೃಷ್ಣಾಕುಮಾರಿಯನ್ನು ಮಾನಸಿಂಹನಿಗೆ ಕೊಡುವುದಕ್ಕಿಂ ತಲೂ ಕೊಲ್ಲುವುದೇ ಉತ್ತಮವೆಂದು ಹೇಳಿದನು. ಈ ಯೆರ ಡರಲ್ಲಿ ಕೃಷ್ಣಾಕುಮಾರಿಯನ್ನು ಕೊಲ್ಲುವುದೇ ಉತ್ತಮ ವೆಂದು ರಾಜನಿಗೆ ತೋರಿತು. ಆದರೆ ಸ್ತ್ರೀಹತ್ಯವನ್ನು ಮಾಡುವುದಕ್ಕೆ ಆತನ ಸೇವಕರಲ್ಲಿ ಒಬ್ಬನೂ ಒಡಂಬಡದೆ ಹೋದರು.

ಭೀಮಸಿಂಹನು ದೌಲತಸಿಂಗನೆಂಬ ಸೇವಕನನ್ನು ಕರೆದು, ಕುಮಾರಿಯನ್ನು ಕೊಲ್ಲಲು ಆಜ್ಞಾಪಿಸಿದನು. ಅದಕ್ಕೆ

ಆಭೃತ್ಯನು ಪ್ರಭುವನ್ನು ತಿರಸ್ಕರಿಸಿ ತಾನು ಅಂಥ ಕೆಲಸವನ್ನು ಮಾಡುವುದಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟನು. ತದನಂತರ ರಾಣಾವು ಯೌವನಸಿಂಹನೆಂಬುವನನ್ನು ಕರೆದು ಈ ಘೋರಕರ್ಮವನ್ನು ಮಾಡೆಂದು ಹೇಳಿದನು. ಯೌವನಸಿಂಹನು ಇಂಥ ಕಾರ್ಯವನ್ನು ಮಾಡುವುದಕ್ಕೆ ತನಗೆ ಇಷ್ಟವಿಲ್ಲದಿದ್ದರೂ ರಾಜಾಜ್ಞೆಗೆ ಹೆದರಿ ಒಪ್ಪಿಕೊಂಡನು. ಆಗ ಆತನು ಕೈಯಲ್ಲಿ ಖಡ್ಗವನ್ನು ಧರಿಸಿ ಆ ಕನ್ಯೆನಿದ್ರಿಸುವ ಮನೆಗೆ ಹೋದನು. ಆದರೆ ಆ ನಿದ್ರಿಸುವ ಸೌಂದರ್ಯರಾಶಿಯನ್ನು ಕಂಡೊಡನೆಯೇ ಆತನ ಕೈಯಖಡ್ಗವು ಕೈಯಿಂದ ಜಾರಿ ಕೆಳಗೆ ಬೀಳಲು, ಅವನು ಆ ಕಾರ್ಯವನ್ನು ಬಿಟ್ಟು ತುಂಬಾ ದುಃಖದಿಂದ ಹೊರಟು ಹೋದನು. ತದನಂತರ ಅವಿಾರ್‌ಖಾನನ ದುರ್ಮಂತ್ರವು ಹೊರಪಡಲಾಗಿ ರಾಜಸತಿಯ ದುಃಖವು ಮಿತಿ ಇಲ್ಲದ್ದಾಯಿತು. ರಾಜಭವನದಲ್ಲೆಲ್ಲಾ ದುಃಖಮಯವಾಗಿದ್ದರೂ ಕೃಷ್ಣಾಕುಮಾರಿಯ ಮುಖದಲ್ಲಿ ಎಷ್ಟು ಮಾತ್ರವೂ ಮೃತ್ಯುಭೀತಿಯು ಕಾಣಬರಲಿಲ್ಲ. ಆಕೆಯು ಎಂದಿನ ಹಾಗೆ ಸಂತೋಷವಾಗಿಯೇ ಆಡುತ್ತ ಪಾಡುತ್ತ ಜೊತೆಯ ಬಾಲೆಯರಿಗೆ ನೀತಿಗಳನ್ನು ಬೋಧಿಸುತ್ತ ಕಾಲವನ್ನು ಕಳೆಯುತ್ತಿದ್ದಳು.

ನಿನ್ನ ಮಗಳನ್ನು ವಿಷಪ್ರಯೋಗದಿಂದ ಕೊಲ್ಲೆಂದು ರಾಣಾಯವರಿಗೆ ಅವಿಾರ್‌ಖಾನನು ಆಲೋಚನೆಯನ್ನು ಹೇಳಿದನು. ಅಂಥಾ ನೀಚಕೃತ್ಯವು ರಾಣಾಯವರಿಗೆ ಸಂಮತವಾದ್ದ

ರಿಂದ ಒಂದು ಬಂಗಾರದ ಬಟ್ಟಲಲ್ಲಿ ವಿಷವನ್ನು ಹಾಕಿ ಅದನ್ನು ಆತನು ಮಗಳಸಮೀಪಕ್ಕೆ ಕಳುಹಿಸಿದನು. ಅದನ್ನು ಕೃಷ್ಣಾ ಕುಮಾರಿಯ ಸಮೀಪಕ್ಕೆ ತಂದ ಸೇವಕನು "ಈ ವಿಷವನ್ನು ನಿಮ್ಮ ತಂದೆಯು ನಿಮಗಾಗಿ ಕಳುಹಿಸಿದನಲ್ಲದೆ ಇದನ್ನು ನೀವು ಸ್ವೀಕರಿಸಬೇಕಂದು" ಹೇಳಲಾಗಿ ಆ ಬಾಲೆಯು ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಆ ವಿಷಪಾತ್ರೆಯನ್ನು ಆ ಭೃತ್ಯನ ಕೈಯಿಂದ ತೆಗೆದುಕೊಂಡು ಪರಮೇಶ್ವರನನ್ನು ಪ್ರಾರ್ಥಿಸಿ ತಂದೆಗೆ ಧನಾಯುಷ್ಯ ಸಮೃದ್ಧಿಯಾಗಲೆಂದು ಆ ವಿಷಯುವನ್ನು ಆಕೆಯು ಕುಡಿದುಳು. ವಿಷಪ್ರಾಶನಾನಂತರ ಆಕೆಯು ಮರಣಭಯುವನ್ನು ಹೊಂದದೆ ತನ್ನ ಇಷ್ಟದೈವವನ್ನು ಪ್ರಾರ್ಥಿಸುತ್ತಲಿದ್ದಳು. ಇಷ್ಟರಲ್ಲಿ ಅಕೆಯ ತಾಯಿಯು ಶೋಕಿಸುವದನ್ನು ಕಂಡು ಆ ಬಾಲೆಯು ತಾಯಿಗೆ ಹೀಗೆ ಸಮಾಧಾನವನ್ನು ಹೇಳಿದಳು, "ಅಮ್ಮಾ! ನೀನು ಏತಕ್ಕೆ ಶೋಕಿಸುವೆ! ದುಃಖವು ಎಷ್ಟು ಜಾಗ್ರತೆಯಾಗಿ ತಗ್ಗಿದರೆ ಅಷ್ಟು ಒಳ್ಳೇದು. ನಾನು ಕ್ಷತ್ರಿಯ ವೀರನ ಮಗಳಾದ್ದರಿಂದ ಮರಣಕ್ಕೆ ಭಯಪಡೆನು. ಈ ಶರೀರಕ್ಕೆ ಹುಟ್ಟಿದಕೂಡಲೇ ಸಾವು ಸಿದ್ಧವು. ಇನ್ನು ನನ್ನ ಸಾವಿಗಾಗಿ ಚಿಂತಿಸಿದರೆ ಏನುಫಲವು." ಇಂತಹ ವಾಕ್ಯಗಳಿಂದ ತಾಯಿಗೆ ಸಮಾಧಾನವನ್ನು ಹೇಳುತ್ತ, ನಗುತ್ತಾ ಇದ್ದಳೇ ಹೊರತು ಆ ಬಾಲಕಿಯು ಆವಿಷದಿಂದ ಮೃತಿಹೊಂದಲಿಲ್ಲ.

ಆಮೇಲೆ ಎರಡನೆಯ ಭೃತ್ಯನು ಮತ್ತೊಂದು ಪಾತ್ರೆಯಲ್ಲಿ ವಿಷವನ್ನು ಹಾಕಿಕೊಂಡು ಬಂದು ಆಕೆಗೆ

ಕುಡಿಸಿದನು. ಆದರೆ ಅದರಿಂದಲೂ ಆಕೆಗೆ ಮರಣ ಚಿಹ್ನೆಯು ಕಾಣಬರಲಿಲ್ಲ. ಕೊನೆಗೆ ಆಕೆಯು ಸಾಯದೆ ಇದ್ದುದರಿಂದ ಸಮರಸವೆಂಬ ಒಂದು ಭಯಂಕರವಾದ ವಿಷವನ್ನು ಆಕೆಗೆ ಕೊಟ್ಟರು. ಅದನ್ನು ಕುಡಿದಕೂಡಲೇ ಆ ಕನ್ಯಾರತ್ನದ ಪವಿತ್ರ ಚರಿತ್ರೆಯು ಮುಗಿಯಿತು. ಆದರೆ ಕೃಷ್ಣಾಕುಮಾರಿಯ ಧೈರ್ಯವೂ, ನಿರ್ಭಯತ್ವವೂ, ಸತ್ಯಶೀಲತೆಯೂ, ದೇಶಕ್ಕೋಸ್ಕರವೂ ತಂದೆಗೋಸ್ಕರವೂ ತೋರಿಸಿದ ಆತ್ಮತ್ಯಾಗವೇ ಮೊದಲಾದವುಗಳು ಈ ಪ್ರಪಂಚದಲ್ಲಿ ಇದ್ದು ಆಕೆಯ ಕೀರ್ತಿಯನ್ನು ಅಜರಾಮರವನ್ನಾಗಿ ಮಾಡುತ್ತಿರುವವು.



# ೮. ಉಮಾಬಾಯಿ ದಾಭೇಡೆ.

---

ಈ ಉಮಾಬಾಯಿಯು ಮಹಾರಾಷ್ಟ್ರರಾಜ್ಯ ಸಂಸ್ಥಾಪಕನಾದ ಛತ್ರಪತಿ ಶಿವಾಜಿಯ ಮೊಮ್ಮಗನಾದ ಸಾಹುರಾಜನ ಕಾಲದಲ್ಲಿ ಇದ್ದಹಾಗೆ ತಿಳಿಯಬರುತ್ತದೆ. ಉಮಾಬಾಯಿಯ ಮಾವನಾದ ಯೇಸೋ ಪಾಟಲ್ ದಾಭೇಡೆ ಎಂಬವನು ಶಿವಾಜಿಯ ಹತ್ತಿರ ಒಬ್ಬ ಭೃತ್ಯನಾಗಿದ್ದನು. ಆದರೆ ಶಿವಾಜಿಯ ಎರಡನೇ ಮಗನಾದ ರಾಜಾರಾಮನ ಪರಿಪಾಲನೆಯ ದಿನಗಳಲ್ಲಿ ಆತನೂ ಆತನ ಇಬ್ಬರು ಪುತ್ರರೂ ಸ್ವಹಿತವನ್ನು ಎಣಿಸದೆ ಸ್ವಾಮಿಕಾರ್ಯವನ್ನು ನಿರ್ವಹಿಸಿದ್ದರಿಂದ ಅಂದಿನಿಂದಲೂ ರಾಜನು ಮೆಚ್ಚಿ ಅವರಿಗೆ ಸೇನಾನಿತ್ವವನ್ನು ಕೊಟ್ಟನು. ಈ ಏಸೋ ಪಾಟಲನ ದೊಡ್ಡ ಮಗನ ಹೆಸರು ಖಂಡೋಜಿ, ಈತನ ಪತ್ನಿಯ ಹೆಸರು ಉಮಾಬಾಯಿ. ಸಾಹುಮಹಾರಾಜನು ಢಿಲ್ಲಿಯಿಂದ ಸ್ವರಾಜ್ಯಕ್ಕೆ ಬಂದಮೇಲೆ ಪುನಃ ಮಹಾರಾಷ್ಟ್ರ ರಾಜ್ಯವು ಕ್ಷೀಣವಾಗದೆ ಉನ್ನತಾವಸ್ಥೆಯನ್ನು ಹೊಂದಲಾರಂಭಿಸಿತು. ಇಂಥಾ ಸಮಯದಲ್ಲಿ ಖಂಡೆರಾವ್ ದಾಭೇಡೆ ತನ್ನ ಶೌರ್ಯದಿಂದ ಅನೇಕ ಯುದ್ಧಗಳಲ್ಲಿ ಜಯವನ್ನು ಸಂಪಾದಿಸಿ, ತುಂಬ ಉನ್ನತಿಗೆ ಬಂದನು.

ಬಾಲಾಜೀ ವಿಶ್ವನಾಥ ಪೇಷ್ವೆ ಯವರೂ ಖಂಡೆರಾವೂ ಪ್ರಾಣಸ್ನೇಹಿತರಾಗಿದ್ದರು. ಆದರೆಅನಂತರದಲ್ಲಿ ಅವರ

ಪುತ್ರರಾದ ಪ್ರಥಮ ಬಾಜೀರಾವು ಪೇಷ್ವೆಯವರಿಗೂ, ತ್ರಿಯಂಬಕರಾವು ಸೇನಾಪತಿಗೂ ತಂದೆಯರವ ಕಾಲದ ಸ್ನೇಹಭಾವವು ಇಲ್ಲದೆ ವೈರವು ಪ್ರಾಪ್ತಿಸಿತು. ಬಾಜೀರಾವು ಉತ್ತರ ಹಿಂದೂ ಸ್ಥಾನವನ್ನೂ, ದಾಭೇಡೇ ಘೂರ್ಜರ ದೇಶವನ್ನೂ ಅಪಹರಿಸಲು ಯೋಚಿಸಿದರು. ಆಗ ಆ ಇಬ್ಬರೂ ಒಬ್ಬರಮೇಲೆ ಮತ್ತೊಬ್ಬರು ಅನೇಕ ಕಾರಣ ಗಳನ್ನು ಆರೋಪಿಸಿ ಯುದ್ಧಸನ್ನದ್ಧರಾದರು. ಆ ಯುದ್ಧದಲ್ಲಿ ದಾಭೇಡೇ ತನ್ನ ಅಸಾಮಾನ್ಯ ಶೌರ್ಯವನ್ನು ತೋರಿಸಲು ಆತನ ಸಂಗಡ ಗೆಲ್ಲುವದು ದುಸ್ತರವೆಂದುತಿಳಿದು ಬಾಜಿರಾವು ತುಂಬಾ ಅನ್ಯಾಯದಿಂದ ಆ ಶೌರ್ಯನಿಧಿಯನ್ನು ಸಂಗ್ರಾಮದಲ್ಲಿ ಬೀಳಿ ಸಿದನು. ಈ ಸಂಗತಿಯು ತ್ರಿಯಂಬಕರಾಯನ ತಮ್ಮನಾದ ಯಶವಂತರಾವು ದಾಭೇಡೆಗೆ ತಿಳಿಯಲಾಗಿ ಆತನು ಅಧಿಕ ರೋಷ ಚಿತ್ತನಾಗಿ ಬಾಜೀರಾವನ್ನು ಕೊಲ್ಲದೆ, ಅಣ್ಣನ ಉತ್ತ ರಕ್ರಿಯೆಯನ್ನು ನಡೆಸುವದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿ ದನು. ಅದಕ್ಕೆ ಉಮಾಬಾಯಿ ಸಮ್ಮತಿಸಿ ತಾನೂ ಯು ದ್ಧಕ್ಕೆ ಬರುತ್ತೇನೆಂದು ಹೇಳಿದಳು. ಆ ಮಾತನ್ನು ಕೇಳಿ ಬಾಜೀರಾಯನು ತುಂಬ ದೈನ್ಯವನ್ನು ಹೊಂದಿ ಸಾಹುವನ್ನು ಮಧ್ಯಸ್ಥನನ್ನಾಗಿ ಬಾರೆಂದು ಬೇಡಿಕೊಂಡನು.

ಆಗ ಸಾಹುಮಹಾರಾಜನು ಆತನನ್ನು ತನ್ನ ಹಿಂದೆ ಕರೆದುಕೊಂಡು ತಾಲಿಗ್ರಾಂ ಎಂಬ ಗ್ರಾಮದಲ್ಲಿ ಉಮಾಬಾ ಯಿಯನ್ನು ನೋಡಿ ಬಾಜೀರಾಯನನ್ನು ಆಕೆಯ ಪಾದದ

ಮೇಲೆ ಬೀಳಿಸಿ, "ಖಂಡೇರಾವು ದಾಭೇಡೆಯವರೂ, ಬಾಲಾಜೀ ವಿಶ್ವನಾಥರವರೂ, ಅಣ್ಣತಮ್ಮಂದಿರ ಹಾಗೆ ಇದ್ದರು. ನಿನಗೆ ಈ ಬಾಜೀರಾಯನು ಪುತ್ರಸಮಾನನು. ಆದ್ದರಿಂದ ಈತನ ಅಪರಾಧಗಳನ್ನು ಮನ್ನಿಸಿ ರಕ್ಷಿಸು," ಎಂದು ಆ ರಾಜನು ಕೇಳಿಕೊಳ್ಳಲಾಗಿ ; ತನ್ನ ಮನಸ್ಸಿನಲ್ಲಿದ್ದ ವೈರವನ್ನು ಬಿಟ್ಟು ಶರಣಾಗತನಿಗೆ ಅಭಯವನ್ನು ಕೊಟ್ಟಳು. ತದನಂತರದಲ್ಲಿ ಕೆಲವು ದಿನಗಳಿಗೆ ಈಕೆಯ ಪುತ್ರರುಗಳಿಬ್ಬರನ್ನು ಸಾಹು ಮಹಾರಾಜನು ಅಹಮದಾಬಾದು ರಾಜ್ಯವನ್ನು ಜಯಿಸುವದ ಕ್ಕಾಗಿ ಹೊರಡಬೇಕೆಂದು ಆಜ್ಞಾಪಿಸಿದನು. ಪುತ್ರರು ಬಾಲ ಕರೆಂದೂ, ಅವರಿಬ್ಬರೂ ಈ ಕಾರ್ಯವನ್ನು ನಿರ್ವಹಿಸಲಾರ ರೆಂದೂ ತಿಳಿದವಳಾಗಿ ; ಉಮಾಬಾಯಿಯು ತಾನೂ ಅವರ ಸಂಗಡ ಪ್ರಯಾಣವಾದಳು. ಆಕೆ ವೀರಪತ್ನಿಯೂ, ವೀರ ಮಾತೆಯೂ ಆದ್ದರಿಂದ, ಆಕೆಗೆ ಯುದ್ಧವೆಂದರೆ ಮನೆಗೆಲಸದ ಹಾಗೆ ಇತ್ತು.

ಇಷ್ಟರಲ್ಲಿಯೇ ಉಮಾಬಾಯಿಯು ಇಬ್ಬರು ಪುತ್ರ ರುಗಳ ಸಂಗಡ ತನ್ನನ್ನು ಜಯಿಸಲು ಬರುವಳೆಂಬ ವರ್ತಮಾನವನ್ನು ಅಹಮ್ಮದಾಬಾದು ರಾಜ್ಯಾಧಾರನಾದ ಜೋರಾವರಖಾನ್ ಬಾಬಿಯನೆಂಬುವನು ಕೇಳಿ, ಉಮಾಬಾ ಯಿಗೆ ಹೀಗೆ ವರ್ತಮಾನವನ್ನು ಕಳುಹಿಸಿದನು. "ನೀನು ಅನಾಥಳಾದ ಸ್ತ್ರೀಯು, ನಿನ್ನ ಮಕ್ಕಳಿಬ್ಬರೂ, ಅಲ್ಪವಯ ಸ್ಕರು. ಆದ್ದರಿಂದ ನೀನು ಹಿಂದಿರುಗುವುದು ಒಳ್ಳೇದು. ಇಲ್ಲದಿ

ದ್ದರೆನಾವು ನಮ್ಮ ತುರುಕರ ಪ್ರತಾಪವನ್ನು ತೋರಿಸದೆ ಇರು ವುದಿಲ್ಲ." ಈ ವಾರ್ತೆಗಳುಳ್ಳ ಪತ್ರವನ್ನು ನೋಡಿ ಉಮಾಬಾ ಯಿಯ ಶೌರ್ಯಾಗ್ನಿಯು ಮತ್ತಷ್ಟು ಪ್ರಜ್ವಲಿಸಿತು.

ಆಗ ಆ ಮ್ಲೇಚ್ಛನ ಗರ್ವವನ್ನು ಅಡಗಿಸಿದ ಹೊರತು ನಾನು ಭೋಜನವನ್ನು ಮಾಡುವುದಿಲ್ಲವೆಂದು ಶಪಥವನ್ನು ಮಾಡಿ, ತನ್ನ ಕಡೆ ಸರದಾರರೆಲ್ಲರನ್ನೂ ಕರೆಯಿಸಿ ಒಂದು ಸಭೆಯನ್ನು ಮಾಡಿದಳು. ಆ ಸಭೆಗೆ ಎಲ್ಲರೂ ಬರುವದಕ್ಕೆ ಮುಂಚೆಯೇ ಆಕೆ ಅರಿಸಿನ, ಕುಂಕುಮ, ಬಳೆಗಳು, ಮೊದ ಲಾದವುಗಳನ್ನು ತರಿಸಿ ಸಭೆಯ ಮಧ್ಯದಲ್ಲಿ ಇರಿಸಿದಳು. ಸಭಿಕರೆಲ್ಲರೂ ಬಂದಮೇಲೆ ಆಕೆಯು ಜೋರಾವರಖಾನಾ ಬಾಬಿ ಬರೆದ ಪತ್ರವನ್ನು ಅವರಿಗೆ ತಿಳಿಯಪಡಿಸಿ, "ಅಹಮದಾ ಬಾದ್ ಕೋಟೆಯನ್ನು ಜಯಿಸಿ ಅಲ್ಲಿಯೇ ಭೋಜನವನ್ನು ಮಾಡುವೆನೆಂದು ನಿಶ್ಚಯಿಸಿದೆನು. ನೀವೆಲ್ಲರೂ ಇದುವರೆಗೂ ನನ್ನ ಅನ್ನವನ್ನು ತಿನ್ನುತ್ತಿದ್ದವರು. ಆದ್ದರಿಂದ ನನ್ನ ಪ್ರತಿ ಜ್ಞೆಯಲ್ಲಿ ಅಭಿಮಾನವೂ, ಆದರವೂ ಉಳ್ಳವರಾಗಿ ಮರಣಕ್ಕೆ ಭಯಪಡಲಾಗದು. ತತ್‌ಕ್ಷಣವೇ ನಿಮ್ಮ ತಲೆಗಳನ್ನು ಶತ್ರು ವಿನ ಕೈಯಲ್ಲಿ ಇಟ್ಟುಕೊಂಡು, ನನ್ನಸಂಗಡ ಯುದ್ಧಭೂಮಿಗೆ ಬಂದು, ಮ್ಲೇಚ್ಛರ ಸಂಗಡ ಹೋರಾಡುವುದಕ್ಕೆ ಸನ್ನದ್ಧರಾಗಿ. ಇಲ್ಲದೆ ಪ್ರಾಣಗಳ ಮೇಲೆ ಭಯವಿರುವ ಪಕ್ಷದಲ್ಲಿ, ಇಲ್ಲಿರುವ ಅರಿಸಿನ ಕುಂಕುಮಗಳನ್ನು ಇಟ್ಟುಕೊಂಡು ಬಳೆಗಳನ್ನು ತೊಟ್ಟುಕೊಂಡು ನಿಮ್ಮ ನಿಮ್ಮ ಗೃಹಗಳಿಗೆ ಹೋಗಿ ಬದುಕಿ

ಕೊಳ್ಳಿರಿ" ಎಂದಳು. ಇಂಥಾ ವಾಕ್ಯಗಳನ್ನು ಕೇಳಿದ ಮೇಲೆ ಯುದ್ಧಕ್ಕೆ ಹಿಂಜರಿಯುವವನು ಆ ಸಭೆಯಲ್ಲಿ ಒಬ್ಬನೂ ಕಾಣ ಬರಲಿಲ್ಲ. ಆದ್ದರಿಂದ ಅವರೆಲ್ಲರೂ ಆ ಕ್ಷಣದಲ್ಲಿಯೇ ಯುದ್ಧ ಸನ್ನದ್ಧರಾಗಿ ಹಗೆಗಳ ಮೇಲೆ ದಂಡೆತ್ತಿ ಹೊರಟರು.

ಆಗ ಉಮಾಬಾಯಿಯು ತನ್ನ ಅಂಬಾರಿಯ ಸುತ್ತಲೂ ತೆರೆಯನ್ನು ಕಟ್ಟಿಸಿಕೊಂಡು ಆಯುಧಪಾಣಿಯಾಗಿ ಗಜಾರೋಹಣ ಮಾಡಿದಳು. ಆಕೆಯ ಪುತ್ರರಿಬ್ಬರೂ ತಾಯಿಯ ಪಾರ್ಶ್ವದಲ್ಲಿಯೇ ಕೂತುಕೊಂಡರು. ಈ ಪ್ರಕಾರ ಈ ಉಮಾಬಾಯಿಯು ಸೈನ್ಯಸಹಿತವಾಗಿ ಸಂಗ್ರಾಮರಂಗವನ್ನು ಅಲಂಕರಿಸಿದಳು. ನೋಡಿದಿರಾ? ಈಕೆಯ ಧೈರ್ಯವು! ಇದೇ ಅಲ್ಲವೇ ನಿಜವಾದ ಸಾಹಸವು. ಹೀಗೆ ಪರಾಕ್ರಮವಂತೆಯಾದ ಉಮಾಬಾಯಿಯು ಡಿಲ್ಲಿಪತಿಯ ಸೇವಕನಾದ ಜೋರಾವರ್‌ಖಾನ್ ಎಂಬ ಯೋಧನನ್ನು ಹಿಡಿಸುವುದಕ್ಕೆ ಸಿದ್ಧವಾಗಿದ್ದ ಸಮಯದಲ್ಲಿ, ಅವನೂ ಹತ್ತುಸಾವಿರ ಸೈನಿಕರ ಸಂಗಡ ಆಕೆಯನ್ನು ಎದುರಿಸಿದನು. ಆಗ ಉಭಯ ಸೈನ್ಯಗಳೂ ಒಂದಕ್ಕೊಂದು ಕಲೆತು ಹೋರಾಡಲಾರಂಭಿಸಿದವು. ಹೀಗೆ ಸ್ವಲ್ಪ ಹೊತ್ತು ಸಂಗ್ರಾಮ ಜರುಗಿದ ಮೇಲೆ ಉಮಾಬಾಯಿಯ ಸಂಗ್ರಾಮ ಚಾತುರ್ಯದಿಂದ ತುರುಕರಿಗೆ ಅಪಜಯವುಂಟಾಯಿತು. ಆಗ ಅವನು ನಗರಕ್ಕೆ ಹೋಗಿ ನಗರದ್ವಾರವನ್ನು ಮುಚ್ಚಿಕೊಂಡನು. ಯುದ್ಧವು ಅಹಮದಾಬಾದು ಸಮೀಪದಲ್ಲಿಯೇ ನಡೆಯುತ್ತಿದ್ದುದರಿಂದ, ಉಮಾಬಾಯಿಯು ಸೈನಿಕರ

ಸಂಗಡಲೇ ಹೆಣದಮೇಲೆ ಹೆಣವನ್ನು ಜೋಡಿಸಿ ಕೋಟೆ ಯನ್ನು ಹತ್ತಿ ಅಹಮದಾಬಾದಿನೊಳಕ್ಕೆ ಪ್ರವೇಶಿಸಿದಳು. ಈಚೆಯಿದ್ದ ಸೈನಿಕರೂ ನಗರದ್ವಾರವನ್ನು ಒಡೆದುಕೊಂಡು ಗ್ರಾಮದೊಳಕ್ಕೆ ಪ್ರವೇಶಿಸಿದರು. ಸತ್ಯಪ್ರತಿಜ್ಞಳಾದ ಉಮಾ ಬಾಯಿಯು ಅಹಮದಾಬಾದು ಕೋಟೆಯೊಳಗೆ ಆದಿನ ಭೋ ಜನವನ್ನು ಮಾಡಿದಳು. ಇದರಿಂದ ಆಕೆಯ ಶೌರ್ಯವೂ, ದೃಢನಿಶ್ಚಯವೂ ತಿಳಿಯಲ್ಪಡುವುವು.



# ೨೪ ಗೌತಮರಾಣಿ.

---

ಈಕೆ ವಿಹಾರದೇಶದಲ್ಲಿ ಬಕ್ಸಾ ಪಟ್ಟಣದ ಸಮೀಪದಲ್ಲಿರುವ ಅರ್ಗಳಸಂಸ್ಥಾನಾಧೀಶ್ವರನ ಭಾರ್ಯೆ. ಈಕೆಯ ಹೆಸರು ಎಲ್ಲಿಯೂ ತಿಳಿಯುವ ಮಾರ್ಗವಿಲ್ಲದ್ದರಿಂದ ಎಷ್ಟೋ ಚಿಂತಿಸಬೇಕಾಗಿದೆ. ಈ ಕಾಂತಾರತ್ನವನ್ನು ಭಾರ್ಯೆಯನ್ನಾಗಿ ಪಡೆದಸಂಸ್ಥಾನಾಧಿಪತಿಯ ಹೆಸರು ಗೌತಮನು. ಆತನು ಡಿಲ್ಲೀಶ್ವರನಿಗೆ ಕಪ್ಪವನ್ನು ಕೊಡದ್ದರಿಂದ ಡಿಲ್ಲೀಪತಿಗೆ ಆತನ ಮೇಲೆ ಅಧಿಕರೋಷ ಬಂದು, ಆತನನ್ನು ಆಟಿಡಿಸಿ ತನ ರಾಜ್ಯವನ್ನು ವಶಮಾಡಿಕೊಳ್ಳುವುದೆಂದು ಆಯೋಧ್ಯಾ ನವಾಬನಿಗೆ ಡಿಲ್ಲೀಶ್ವರನು ಉತ್ತರವಸಿತ್ತನು. ಆಗ ಆ ನವಾಬನು ಸೈನ್ಯಸಹಿತನಾಗಿ ಗೌತಮರಾಜನ ಮೇಲೆ ಯುದ್ಧಸನ್ನದ್ಧನಾಗಿ ಬರಲು; ಗೌತಮನು ಸಾಮಾನ್ಯನಲ್ಲದ್ದರಿಂಡ, ತಾನು ಒಂದು ಚಿಕ್ಕಸಂಸ್ಥಾನಾಧೀಶ್ವರನಾದರೂ ಶತ್ರುಗಳಿಗೆ ಅಂಜದೆ, ಅವರ ಸಂಗಡ ಹೋರಾಡಿ ಅವರನ್ನು ಪರಾಜಿತರನ್ನಾಗಿ ಮಾಡಿದನು. ಹೀಗೆ ವಿಜಯವನ್ನು ಹೊಂದಿ ವಿಜಯೋತ್ಸಾಹದಿಂದ ರಾಜನು ಮನೆಗೆ ಬಂದದ್ದರಿಂದ ಆ ದಿನ ಪಟ್ಟಣದಲ್ಲೆಲ್ಲ ಅನೇಕವಾಗಿ ಉತ್ಸವಗಳು ನಡೆದವು. ಇಂಥ ಸಂತೋಷಕಾಲದಲ್ಲಿ ರಾಣಿಯವರಿಗೆ ಗಂಗಾಸ್ನಾನ ಮಾಡಬೇಕೆಂದು ಇಚ್ಛೆಯುಂಟಾಯಿತು. ಗಂಗಾಪ್ರವಾಹವು ಅರ್ಗಳ ಪಟ್ಟಣದ ಸಮೀಪದಲ್ಲಿಯೇ ಇದ್ದರೂ ಪರಾಜಿತರಾದ ಶತ್ರುಗಳು ಅಲ್ಲಿ ಅವಿತು

ಕೊಂಡಿರುವುದರಿಂದ ಅಲ್ಲಿಗೆ ಸ್ನಾನಕ್ಕೆ ಹೋಗುವುದು ಅತಿ ಕಷ್ಟತರವಾಗಿತ್ತು. ಆದರೆ ಹೇಗಾದರೂ ಗಂಗಾಸ್ನಾನವನ್ನು ಮಾಡಬೇಕೆಂದು ರಾಣಿಯು ನಿಶ್ಚಯಿಸಿಕೊಂಡಿದ್ದುದರಿಂದ, ತನ್ನ ವೇಷವನ್ನು ಬದಲಾಯಿಸಿ ಕೆಲವರು ದಾಸಿಯರನ್ನು ಸಂಗಡ ಕರೆದುಕೊಂಡು ಊರಿನವರಲ್ಲಿ ಯಾರಿಗೂ ತಿಳಿಯದಂತೆ ಗಂಗಾಸ್ನಾನಕ್ಕೆ ಹೊರಟಳು.

ಆಕೆಯು ಹೋಗುವ ರೇವಿಗೆ ಹೋಗಿ, ತಾನು ಇಂಥ ವಳೆಂದು ಯಾರೂ ತಿಳಿಯದ ಹಾಗೆ ಬಹು ಜಾಗರೂಕತೆ ಯುಳ್ಳವಳಾಗಿ ಸ್ನಾನವನ್ನು ಮಾಡುತ್ತಿದ್ದಳು. ಆದರೆ ಅಸ ಮಾನ ಸೌಂದರ್ಯವತಿಯಾದ ರಾಜಯುವತಿಯು ಎಂಥ ವೇಷ ವನ್ನು ಹಾಕಿಕೊಂಡರೂ ತಿಳಿಯದಿರುವುದು ದುರ್ಲಭವಾದ್ದ ರಿಂದ ಯಾರೋ ಒಬ್ಬ ರಾಜಸ್ತ್ರೀಯು ಸಮೀಪದಲ್ಲಿರುವ ರೇವಿಗೆ ಸ್ನಾನಾರ್ಥವಾಗಿ ಬಂದಿರುವಳೆಂಬ ಸಮಾಚಾರವು ಆ ಕ್ಷಣದಲ್ಲಿಯೇ ಆ ಗಂಗಾತೀರದಲ್ಲಿ ವ್ಯಾಪಿಸಿತು. ಆಗ ಅಲ್ಲಿಗೆ ಸಮೀಪದಲ್ಲಿದ್ದ ಅಯೋಧ್ಯಾ ನವಾಬನಿಗೆ ಈ ಸಂಗ ತಿಯು ತಿಳಿಯಿತು. ಪರಾಜಿತನಾಗಿ ಹಿಂದಕ್ಕೆ ಹೋಗುತ್ತಿರುವ ಸಮಯದಲ್ಲಿ ಶತ್ರುಸ್ತ್ರೀಯು ತನ್ನ ಕೈಗೆ ಅನಾಯಾಸವಾಗಿ ದೊರಕುವಳೆಂಬ ಮಾತನ್ನು ಕೇಳಿ, ನಬಾಬನಿಗೆ ಹಿಡಿಯಲಾ ದಷ್ಟು ಸಂತೋಷವುಂಟಾಯಿತು.

ಕೂಡಲೆ ತನ್ನ ಸಮೀಪದಲ್ಲಿದ್ದ ಕೆಲವರು ಭಟರನ್ನು ನೋಡಿ, ಆ ಸ್ತ್ರೀಯನ್ನು ಕರೆದುಕೊಂಡು ಬನ್ನಿರೆಂದು

ಅಪ್ಪಣೆಮಾಡಿದನು. ಅತ್ತ, ರಾಣಿಯು ತನ್ನ ದಾಸಿಯರ ಸಮೂಹದಿಂದ ತನ್ನ ಪುರಿಗೆ ಹೋಗುತ್ತಿರಲಾಗಿ, ಮಧ್ಯೆ ನವಾಬನು ಕಳುಹಿಸಿದ ಭಟರು ಅವರನ್ನು ಅಡ್ಡಕಟ್ಟಿದರು. ತುರುಕರ ಸೈನ್ಯವು ತಮ್ಮನ್ನು ಅಡ್ಡಗಿಸಲು ಕಂಡು ರಾಣಿಯು ಎಷ್ಟು ಮಾತ್ರವೂ ಧೈರ್ಯವನ್ನು ಬಿಡದೆ ಇದ್ದಳು. ರಾಣಿಯೂ ಆಕೆಯ ಜೊತೆಯಲ್ಲಿದ್ದ ದಾಸಿಯರೂ ಒಂದೊಂದು ಗುಪ್ತ ಖಡ್ಗವನ್ನು ಅದುವರೆಗೇನೇ ಅಮರಿಸಿಕೊಂಡಿದ್ದರು. ಪ್ರತಿಪಕ್ಷದವರನ್ನು ಕಂಡಕೂಡಲೆ ಅವರೆಲ್ಲರೂ ತಮ್ಮಖಡ್ಗಗಳನ್ನು ತೆಗೆದು ಹೋರಾಡಲಾರಂಭಿಸಿದರು. ಆದರೆ ಯುದ್ಧಕಳಾನಿಪುಣರಾದಂಥ ಯವನವೀರರ ಸಂಗಡ ಸ್ತ್ರೀಯರು ಹೇಗೆ ದೀರ್ಘಕಾಲ ಹೊಡೆದಾಡಬಲ್ಲರು ? ರಾಣಿಯು ಈ ಸಂಗತಿಯನ್ನು ತಿಳಿದೇ ಶತ್ರುಗಳ ಸಂಗಡ ತನ್ನ ಕೈಲಾದಮಟ್ಟಿಗೆ ಹೋರಾಡುತ್ತ ಯುದ್ಧವನ್ನು ನೋಡಲು ಅಲ್ಲಿ ಗುಂಪುಗಟ್ಟಿ ನೋಡುತ್ತಿದ್ದ ಪ್ರಜೆಗಳಕಡೆ ನೋಡಿ ಹೀಗೆಂದಳು:—"ಇಲ್ಲಿ ಹಿಂದುಗಳು ಯಾರೂ ಇಲ್ಲವೆ ? ಆರ್ಯಭಗಿನಿಯಾದ ನನ್ನನ್ನು ಈ ಕಷ್ಟಕಾಲದಲ್ಲಿ ರಕ್ಷಿಸುವುದು ನಿಮ್ಮ ಕರ್ತವ್ಯವು. ಸ್ತ್ರೀಯರಿಗೆ ಸಹಾಯಮಾಡಲರಿಯದವರೂ ಸ್ತ್ರೀಯರೆಂತಲೇ ಕರೆಯಲ್ಪಡುವರು."

ಹೀಗೆ ಅತ್ಯಂತ ಮರ್ಮಭೇದಕಗಳಾದ ವಾಕ್ಯಗಳು ರಾಣಿಯ ಬಾಯಿಂದ ಬರುತ್ತಲೇ ಕೇಳಿ ಅಭಯಚಂದ ನಿರ್ಭಯಚಂದರೆಂಬ ಬಿರುದುಗರುಳ್ಳ ಅಣ್ಣ ತಮ್ಮಂದಿರಿಬ್ಬರೂ ಸ್ವಲ್ಪ ಸೇನೆಯ ಸಂಗಡ ಬಂದು ತುರುಕರ ಮೇಲೆ

ಶರಪರಂಪರೆಗಳನ್ನು ಸುರಿಯ ತೊಡಗಿದರು. "ಹರಹರ ಮಹಾದೇವ" ಎಂದು ಶಬ್ದ ಮಾಡುತ್ತ ಶತ್ರುಗಳ ಶಿರಃಕಮಲಗಳನ್ನು ಮಹಾದೇವನಿಗೆ ಅರ್ಪಿಸಲಾರಂಭಿಸಿದರು ಹೀಗೆ ಅವರು ಶತ್ರುಸೇನೆಯೊಡನೆ ಹೋರಾಡುತ್ತ ರಾಣಿಯನ್ನು ಸಮೀಪಿಸಿದರು. ರಾಣಿಯೂ ಪರಿಚಾರಿಕೆಯರೂ ಶತ್ರುಗಳ ಸಂಗಡ ಹೋರಾಡುತ್ತ ಆತ್ಮಸಂರಕ್ಷಣೆಯನ್ನು ಮಾಡಿಕೊಳ್ಳುತ್ತಿದ್ದರು. ಹಿಂದೂ ಸೈನಿಕರು ತಮಗೆ ಸಹಾಯಕರಾಗುವುದನ್ನು ಕಂಡು ಆ ಶೂರ ಸ್ತ್ರೀಯರ ಧೈರ್ಯವು ಹೆಚ್ಚಲು ತಮ್ಮ ಮಹಾದ್ಭುತ ಶೌರ್ಯದಿಂದ ವಿದ್ಯುಲ್ಲತೆಗಳ ಹಾಗೆ ಮೆರೆದರು. ರಾಣಿಯವರನ್ನು ಮಧ್ಯದಲ್ಲಿ ಇಟ್ಟುಕೊಂಡು ಸುತ್ತಲೂ ಸಂರಕ್ಷಕರನ್ನು ನಿಯಮಿಸಿ, ಆ ಸ್ತ್ರೀ ಪುರುಷ ಮಿಶ್ರಿತವಾದ ಸ್ವಲ್ಪ ಹಿಂದೂ ಸೇನೆಯು ಮ್ಲೇಚ್ಛರ ಸೈನ್ಯದಿಂದ ಮೆಲ್ಲಮೆಲ್ಲನೆ ದಾರಿಯನ್ನು ಮಾಡಿಕೊಂಡು ಮುಂದಕ್ಕೆ ನಡೆಯಲಾರಂಭಿಸಿತು. ಆ ಪ್ರತಿ ಹೆಜ್ಜೆಗೂ ಹಿಂದೂ ವೀರರನೇಕರು ಶತ್ರುಗಳಿಂದ ಹತರಾಗುತ್ತಿದ್ದರು.

ಹೀಗೆ ಅತ್ಯಂತ ಶ್ರಮದಿಂದ ಅವರು ಸ್ವಲ್ಪ ದೂರ ನಡೆಯುವಷ್ಟರೊಳಗಾಗಿ ಆ ಸಂಗತಿ ರಾಜನಿಗೆ ತಿಳಿದು, ರಾಣಿಯ ಸಹಾಯಾರ್ಥವಾಗಿ ಒಂದು ದೊಡ್ಡ ಸೈನ್ಯವನ್ನು ಕಳುಹಿಸಿದನು ಆದರಿಂದ ರಾಣಿಗೆ ಎಷ್ಟು ಮಾತ್ರವೂ ಭಯವಿಲ್ಲದೆ ಆಕೆಯು ರಾಜಮಂದಿರವನ್ನು ಪ್ರವೇಶಿಸಿದಳು. ನಿರ್ಭಯಚಂದನು ಯುದ್ಧದಲ್ಲಿ ಮಡಿದನು. ಅಭಯಚಂದನ ಶೌರ್ಯ, ಧೈರ್ಯಗಳಿಗೆ ರಾಜನು ಎಷ್ಟೋ ಆನಂದಪರವಶನಾಗಿ ತನ್ನ

ಮಗಳನ್ನು ಆತನಿಗೆ ಕೊಟ್ಟು ವಿವಾಹ ಮಾಡಿದನು. ಆದರೆ ಅಯೋಧ್ಯಾ ನವಾಬನ ಸ್ಥಿತಿಯು ಅತ್ಯಂತ ಶೋಚನೀಯವಾಯಿತು. ಆತನ ಮೇಲೆ ಹಿಂದೆಯೇ ಗೌತಮನು ಸೇನೆಯನ್ನು ಕಳುಹಿಸಿದ್ದರಿಂದ ಭೀತಿಯಿಂದ ತಾನು ಅಲ್ಲಿಗೆ ತಂದಿದ್ದ ಸಾಮಗ್ರಿಯೆಲ್ಲವನ್ನೂ ಅಲ್ಲಿಯೇ ಬಿಟ್ಟು ಆತನು ಅಯೋಧ್ಯೆಗೆ ಓಡಿಹೋದನು. ಸ್ತ್ರೀಯರನ್ನು ಅನ್ಯಾಯವಾಗಿ ಸೆರೆ ಹಿಡಿಯಲು ಯತ್ನಿಸಿದನೆಂದು ಪ್ರಜೆಗಳೆಲ್ಲರೂ ಆತನನ್ನು ನಿಂದಿಸುವವರಾದರು

 —

*

# ೬. ವೀ ರಾ ಬಾ ಯಿ.

ವೀರಾಬಾಯಿಯು ಚಿತ್ತೂರು ಸಂಸ್ಥಾನಾಧೀಶ್ವರನ ಪತ್ನಿ. ಈಕೆಯು ಅಕ್ಬರು ಬಾದುಷಾ ಕಾಲದಲ್ಲಿ ಇದ್ದ ಹಾಗೆ ಇತಿಹಾಸದಿಂದ ತಿಳಿಯಬರುವುದು. ಆದರೆ ಈಕೆಯ ಜನನ ಮರಣಗಳ ಸಂವತ್ಸರಗಳೂ, ಜನನೀ ಜನಕರ ನಾಮಗಳೂ ತಿಳಿಯುವ ಮಾರ್ಗವೆಲ್ಲಿಯೂ ಕಾಣಬಂದಿಲ್ಲ. ವೀರಾಬಾಯಿಯು ಸ್ವಶೌರ್ಯದಿಂದ ಅಕ್ಬರನನ್ನು ಓಡಿಸಿ ತನ್ನ ಪತಿಯನ್ನು ಬಿಡಿಸಿದಳು. ಅಕ್ಬರು ಬಾದುಷಾ ಚಿತ್ತೂರಿನ ಮೇಲೆ ಎರಡು ಸಲ ದಂಡೆತ್ತಿ ಬಂದರೂ, ಫೆರಿಸ್ತಾ ಎಂಬ ಇತಿಹಾಸಕಾರನು ಬರೆದ ಗ್ರಂಥದಲ್ಲಿ ಒಂದು ಸಲ ದಂಡೆತ್ತಿ ಹೊರಟದ್ದೇ ವರ್ಣಿಸಿದೆ. ಸ್ವಜಾತೀಯನಾದ ಬಾದುಷಾವಿನ ಪರಾಭವವನ್ನು ಆತನು ಹೇಗೆ ತಾನೇ ಬರೆಯುವನು ? ಒಬ್ಬ ರಜಪೂತ ಸ್ತ್ರೀಯಿಂದ ಓಡಿಸಲ್ಪಟ್ಟು ಪಲಾಯಿತನಾದ್ದರಿಂದ ಬಾದುಷಾ ಕೀರ್ತಿಗೆ ಸಂಭವಿಸಿದ ಕಲಂಕವು ಕಾಣಿಸದೆ ಇರುವುದಕ್ಕಾಗಿ ತುರುಕರಾದ ಇತಿಹಾಸಕಾರರು ಚರಿತ್ರೆಯಲ್ಲಿ ಈ ಸಂಗತಿಯನ್ನು ಬರೆಯಲೇ ಇಲ್ಲ.

ಆದರೆ ಆ ಸಮಯದಲ್ಲಿ ಚಿತ್ತೂರು ದರಬಾರಿನಲ್ಲಿ ಇದ್ದವರು ಆ ಯುದ್ಧವನ್ನು ಚೆನ್ನಾಗಿ ವರ್ಣಿಸಿರುವರು. ಅಕ್ಬರು ಬಾದುಷಾ ತನ್ನ ಅಮಿತ ಸೈನ್ಯ ಸಮೇತ ಚಿತ್ತೂರಿನ ಮೇಲೆ

ದಂಡೆತ್ತಿ ಹೊರಟಾಗ ಅಲ್ಲಿ ಉದಯಸಿಂಹನೆಂಬ ರಾಜನು ರಾಜ್ಯವನ್ನು ಆಳುತ್ತಿದ್ದನು. ಉದಯಸಿಂಹ ರಾಣಾವಿನಂಥ ಪುರುಕಿ ರಾಜಪುತ್ರರು ಮತ್ತೆ ಯಾವನೂ ಇರಲಾರನು. ಅಕ್ಬರು ಬಾದುಷಾ ದಂಡೆತ್ತಿ ಬಂದ ವಾರ್ತೆಯನ್ನು ಕೇಳಿ ರಾಣಾವಿಗೆ ದೇಹಕಂಪನೆ ಹತ್ತಿತು. ಆದ್ದರಿಂದ ಆತನು ವಿಜಯ ತುರುಷ್ಕರ ಸೇನೆಯೊಡನೆ ಹೋರಾಡಲು ಸಾಹಸಿಯಾಗ ಲಿಲ್ಲ. ರಾಣಾ ಸಂಗ್ರಾಮಕ್ಕೆ ಹೆದರುವುದನ್ನು ಕಂಡು ಆತನ ಸರ ದಾರರು ತುಂಬ ಆಗ್ರಹಿಸಿ "ನೀವು ಶತ್ರುಗಳನ್ನು ಎದುರಿಸಿ ಯುದ್ಧ ವನ್ನು ಮಾಡದ ಪಕ್ಷದಲ್ಲಿ ನಿಮ್ಮನ್ನು ರಾಜ್ಯಭ್ರಷ್ಟರನ್ನಾಗಿ ಮಾಡು ವೆವು" ಎಂದು ಹೇಳಿದರು. ಹೀಗೆ ಎಲ್ಲರೂ ಏಕವಾಕ್ಯದಿಂದ ಹೇಳಿದ್ದರಿಂದ ವಿಧಿಯಿಲ್ಲದೆ ಭಯದಿಂದ ದೇಹವು ಅದುರಲಾಗಿ ಆ ಧೀರಶಿರೋಮಣಿಯು ವೀರರಾದ ತನ್ನ ಸೈನಿಕರೊಡನೆ ಯುದ್ಧ ಭೂಮಿಯನ್ನು ಸಮೀಪಿಸಿದನು. ಆದರೆ ಸಾಗರದ ಹಾಗೆ ನಾಲ್ಕು ಕಡೆಯಲ್ಲಿಯೂ ತುಂಬಿ ಇರುವ ಯವನ ಸೈನ್ಯಗಳನ್ನು ಕಂಡು ಭೀತಿಯಿಂದ ಸ್ವಲ್ಪಹೊತ್ತು ಏನೂ ತೋರದೆ ನಿಂತುಕೊಂಡಿದ್ದನು. ಆಮೇಲೆ ಹೇಗೋ ಆ ರಾಜನು ತನ್ನ ಸೈನಿಕರಿಗೆ ಯುದ್ಧಕ್ಕೆ ಆಜ್ಞೆ ಮಾಡಿದನು. ರಜಪೂತ ಶೂರ ಸೈನಿಕರೆಲ್ಲರೂ ತುಂಬ ಶೌರ್ಯದಿಂದ ಹೋರಾಡಲಾರಂಭಿಸಿದರು. ಅವರು ಜಯಕಾಂಕ್ಷೆಯಿಂದ ಎಷ್ಟು ಹೋರಿ ದರೂ ಮುಖ್ಯನಾಯಕನ ಅಧೈರ್ಯದಿಂದಲೂ ಪರಬಲಾಧಿಕ್ಯದಿಂದಲೂ ಅವರಿಗೆ ಜಯವುಂಟಾಗುವ ಮಾರ್ಗವು ಕಂಡುಬರಲಿಲ್ಲ. ಚಿತ್ತೂರಿ ಗೋಸ್ಕರವಾಗಿ ಆ ಶೂರರು ಎಷ್ಟು ಶೌರ್ಯವನ್ನು ತೋರಿಸಿದರೂ ಅವೆಲ್ಲವೂ ನಿಷ್ಫಲವಾಗಿ ಉದಯಸಿಂಹನಿಗೆ ಪರಾಭವವುಂಟಾ ಯಿತು. ಅಕ್ಬರು ಬಾದುಷಾ ತತ್‌ಕ್ಷಣವೇ ಆ ಪುರುಕಿ ರಾಜ

ನನ್ನು ಹಿಡಿದು ಸೆರೆಯಲ್ಲಿ ಇಟ್ಟನು. ಅದರಮೇಲೆ ಏನೂ ಮಾಡಲಾರದೆ ಆ ರಜಪೂತ ವೀರರು ಆ ಗ್ರಾಮಕ್ಕೆ ಹಿಂದಿರುಗಿ ಹೋದರು. ಅವರಲ್ಲಿ ಕೆಲವರು ತಮ್ಮ ಮನೆಗಳಿಗೆ ಹೋಗಲಾಗಿ ಅವರ ಸ್ತ್ರೀಯರು ಪರಾಭವವನ್ನು ಹೊಂದಿ ಬಂದ ಪತಿಗಳನ್ನೂ, ಪುತ್ರರನ್ನೂ, ಸೋದರರನ್ನೂ ಒಳಕ್ಕೆ ಬಾರದಹಾಗೆ ಕದಗಳನ್ನು ಮುಚ್ಚಿಕೊಂಡು, ಅವರನ್ನು ತಿರಸ್ಕರಿಸುತ್ತ ಹೀಗೆಂದರು;—"ರಜಪೂತ ಕುಲದಲ್ಲಿ ನೀವು ಏಕೆ ಜನ್ಮಿಸಿದಿರಿ? ನಾಚಿಕೆ ಇಲ್ಲದೆ ನಿಮ್ಮ ಮುಖಗಳನ್ನು ನಮಗೆ ತೋರಿಸದೆ ಇರಿ ಸಂಗ್ರಾಮದಲ್ಲಿ ಮರಣವಾಗಲಿ, ಜಯವಾಗಲಿ ದೊರಕಿದರೆ ನಿಮಗೆ ಕೀರ್ತಿಯೂ ಯಶಸ್ಸೂ ಉಂಟಾಗುವುವು." ಉದಯಸಿಂಹನನ್ನು ಹಿಡಿದರೆಂದು ತಿಳಿಯಲಾಗಿ ರಾಜಭವನದಲ್ಲೆಲ್ಲಾ ಎಲ್ಲಿ ನೋಡಿದರೂ ದುಃಖಮಯವಾಗಿಯೇ ಇತ್ತು. ಆಗ ರಜಪೂತ ವೀರರೆಲ್ಲರೂ ಸಭೆ ಸೇರಿ "ಉದಯಸಿಂಹ ಮಹಾರಾಜರನ್ನು ಹೇಗೆ ಬಿಡಿಸಿಕೊಳ್ಳುವುದು? ಹೇಗೆ ಶತ್ರುಗಳನ್ನು ಓಡಿಸುವುದು?" ಎಂದು ಚಿಂತಿಸಲಾರಂಭಿಸಿದರು.

ಹೀಗೆ ಅವರು ಅನೇಕ ರೀತಿಗಳಲ್ಲಿ ವಿಚಾರ ಮಾಡಿ ಏನೂ ತೋರದೆ ಚಿಂತಾಕ್ರಾಂತರಾಗಿ ಸ್ವಲ್ಪ ಹೊತ್ತು ಸುಮ್ಮನಿದ್ದರು. ಆ ಸಮಯದಲ್ಲಿ ಆ ಪಟ್ಟಣವೆಲ್ಲವೂ ತುಂಬ ಉದಾಸೀನವಾಗಿ ಇತ್ತು. ಆದರೆ ಪುನಃ ಕ್ಷಣಕಾಲದಲ್ಲಿ ಒಬ್ಬ ಯುವತಿಯು ಅವರನ್ನು ಆನಂದಸಾಗರದಲ್ಲಿ ಓಲಾಡಿಸಿದಳು. ಆ ಸ್ತ್ರೀಯು ಉದಯಸಿಂಹನ ಪತ್ನಿಯಾದ ವೀರಾ

ಬಾಯಿಯೇ. "ನನ್ನ ಪತಿಯನ್ನು ವೈರಿಗಳು ಖೈದು ಮಾಡಿದರು. ರಜಪೂತರು ಓಡಿಹೋದರು. ಚಿತ್ತೂರು ಇನ್ನು ತುರುಕರ ಅಧೀನವಾಗುವುದು. ನಾವುಗಳೆಲ್ಲರೂ ಆ ನೀಚರ ಸ್ವಾಧೀನವಾಗುವೆವು." ಎಂಬಂಥ ವಿಚಾರಗಳು ಅನೇಕವಾಗಿ ಆಕೆಯ ಮನಸ್ಸಿನಲ್ಲಿ ಉದ್ಭವಿಸಲಾರಂಭಿಸಿದವು.

ರಾಜಭವನದಲ್ಲಿ ನಿರುಪಯೋಗವಾಗಿ ಬಿದ್ದು ಇದ್ದ ಅನೇಕ ಶಸ್ತ್ರಗಳು ಆಕೆಯ ಕಣ್ಣಿಗೆ ಬೀಳಲಾಗಿ ಆಕೆಯಲ್ಲಿ ಅಡಗಿದ್ದ ಶೌರ್ಯಾಗ್ನಿಯು ಪ್ರಜ್ವಲಿಸಲಾರಂಭಿಸಿತು. ಆಗ ಆಕೆಯು ನಿಲ್ಲದೆ ಯುದ್ಧಕ್ಕೆ ಅನುಕೂಲವಾದ ಪುರುಷ ವೇಷವನ್ನು ಧರಿಸಿ ಅನೇಕ ಶಸ್ತ್ರಾಸ್ತ್ರಗಳನ್ನು ಧರಿಸಿಕೊಂಡು, ಕಾಳಿಕಾದೇವಿಯು ಪ್ರತ್ಯಕ್ಷವಾದ ಹಾಗೆ ರಾಜಪುತ್ರರ ಸಭೆಯೊಳಕ್ಕೆ ಪ್ರವೇಶಿಸಿದಳು. ಸುಕುಮಾರವಾದ ದೇಹವುಳ್ಳ ಪುರುಷ ವೇಷಧಾರಿಣಿಯಾಗಿ ಬಂದ ವೀರಾಬಾಯಿಯನ್ನು ಕಂಡೊಡನೆಯೇ ಅಲ್ಲಿನ ರಜಪೂತ ವೀರರು ಆಶ್ಚರ್ಯಮಗ್ನಮಾನಸರಾದರು.

ಸ್ವಾತಂತ್ರ್ಯೇಚ್ಛೆಯೂ, ಸ್ವಧರ್ಮಾಭಿಮಾನವೂ ಹೃದಯದಲ್ಲಿ ಇದ್ದುದರಿಂದ ಆಕೆಯ ಕಾಂತಿಯು ತುಂಬ ಪ್ರಜ್ವಲಿಸಿತು. ಆಕೆಯು ಬಹು ರೋಷದಿಂದ ಅಲ್ಲಿ ಕೂಡಿದ್ದ ರಾಜಪುತ್ರರ ಸಂಗಡ ಹೀಗೆಂದಳು;—"ಶೂರಾಗ್ರೇಸರರಾದ ರಾಜಪುತ್ರರುಗಳಿರಾ ! ನೀವು ಹೇಗೆ ಅಧೋಮುಖರಾಗಿ ಚಿಂತಿಸುತ್ತ ಯಾರಿಗೋಸ್ಕರ ನಿರೀಕ್ಷಿಸಿಕೊಂಡು ಇರುವಿರಿ ? ನಿಮ್ಮ ಶೌರ್ಯ

ಧೈರ್ಯಾದಿ ಕ್ಷತ್ರಿಯ ಗುಣಗಳು ಎಲ್ಲಿ ಹೋದವು ? ಚಿತ್ತೂರು ಸಂಸ್ಥಾನವು ಈಗಲೇ ಪೌರುಷಹೀನವಾಯಿತೇ ? ಅಲ್ಲಿನ ರಜಪೂತ ವೀರರೆಲ್ಲರೂ ಕೇವಲ ಶ್ವಾಸೋಚ್ಛ್ವಾಸವುಳ್ಳ ಪುರುಷರಾಗಿ ಹೋದರೆ ? ವೀರಮಾತೆಯಾದ ಭಾರತವರ್ಷವು ಈ ದಿನವೇ ನಿಸ್ತೇಜವಾಗಿಹೋಯಿತೆ ? ನೀವು ಶೂರವಂಶದಲ್ಲಿ ಏಕೆ ಜನ್ಮಿಸಿದಿರಿ ? ಈಗ ಇಲ್ಲಿ ಏಕೀಭವಿಸಿ ಏನು ಚಿಂತಿಸುತ್ತಲಿದ್ದೀರಿ ? ಚಿತ್ತೂರನ್ನು ಅಲಂಕರಿಸುವವನೂ ನಮ್ಮ ಪ್ರಾಣಕ್ಕೆ ಸಮಾನನೂ ಆದ ಮಹಾರಾಜನನ್ನು ಶತ್ರುಗಳು ಕಾರಾಗೃಹಬದ್ಧನನ್ನಾಗಿ ಮಾಡಲಾಗಿ ಕೈಗಳಿಗೆ ಬಳೆಗಳನ್ನು ತೊಟ್ಟುಕೊಂಡ ಸ್ತ್ರೀಯರ ಹಾಗೆ ಮನೆಯಲ್ಲಿ ಇರುವುದಕ್ಕೆ ಏಕೆ ನಾಚಿಕೆಯಿಲ್ಲದೆ ಇದ್ದೀರಿ ? ನಾನು ಹೀಗೆ ಬಾಯಿಗೆ ಬಂದಹಾಗೆ ನಿಮ್ಮನ್ನು ಅವಮಾನಪಡಿಸಲಾಗಿ ನೀವು ಹೇಗೆ ಸಹಿಸುವಿರಿ ? ಇದಕ್ಕಿಂತಲೂ ಯುದ್ಧವನ್ನು ಮಾಡಿ ವೈರಿಗಳಿಂದ ಕೊಲ್ಲಲ್ಪಡುವದು ಸರ್ವೋತ್ತಮವಲ್ಲವೆ ? ಶೂರಾಗ್ರೇಸರರಾದ ಸರದಾರರುಗಳಿರಾ ! ನೀವು ಹೀಗೆ ಉಪೇಕ್ಷೆ ಮಾಡಬೇಡಿರಿ ! ನಿಮಗೆ ಉಂಟಾದ ಪೌರುಷ ಹೀನತೆಯೆಂಬ ಕಳಂಕವನ್ನು ಸಂಪೂರ್ಣವಾಗಿ ಹೋಗಲಾಡಿಸಿಕೊಳ್ಳಿರಿ. ನಿಮಗೆ ಉಂಟಾದ ಶೌರ್ಯ ಧೈರ್ಯಾದಿ ಗುಣಗಳನ್ನು ಕಾಣಿಸಲು ಇದೇ ಸಮಯವು. ಏಳಿರಿ, ಹೊರಡಿರಿ, ಮತ್ತೊಬ್ಬರು ಬರುವುದನ್ನು ನಿರೀಕ್ಷಿಸುವುದೇಕೆ ? ಒರೆಗಳಿಂದ ನಿಮ್ಮ ನಿಮ್ಮ ಖಡ್ಗಗಳನ್ನು ತೆಗೆಯಿರಿ ! ಜಯಹರ ! ಜಯಮಹಾದೇವ ! ಎಂಬ ರಣಘೋಷವನ್ನು ಮೊಳಗಿಸಿರಿ. ತೀವ್ರಗತಿಯನ್ನು ಕಂಡು ಸಂಗ್ರಾಮದಲ್ಲಿ ನಿಮ್ಮ ನಿಮ್ಮ ಪ್ರತಾಪಗಳನ್ನು ತೋರಿಸಿರಿ. ನಾನು ಇದೋ

ಯುದ್ಧಕ್ಕೆ ಹೋಗುತ್ತೇನೆ" ಹೀಗೆಂದು ಆಕೆಯು ಒಂದು ಕುದುರೆಯನ್ನು ಹತ್ತಿದಳು. ಆಗ ರಜಪೂತರೆಲ್ಲರೂ ತಮ್ಮ ಉದಾಸೀನವನ್ನು ಬಿಟ್ಟು ಯುದ್ಧಸನ್ನದ್ಧರಾದರು. ಮೇಕೆಗಳ ಹಾಗಿದ್ದ ಆ ವೀರರು ವೀರಾಬಾಯಿಯ ಪ್ರೋತ್ಸಾಹದಿಂದ ಶಾರ್ದೂಲಗಳ ಹಾಗೆ ಆದರು! ಅದರಿಂದ ಆ ಭೀಮಪರಾಕ್ರಮಿಗಳೆಲ್ಲರೂ ಏಕಕಂಠದಿಂದ ಜಯಘೋಷವನ್ನು ಮೊಳಗಿಸಿದರು.

ಆಗ ಅವರೆಲ್ಲರೂ ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವೆವು. ಇಲ್ಲವೇ ಶತ್ರುಗಳಿಂದ ಕೊಲ್ಲಲ್ಪಡುವೆವೇ ಹೊರತು ಹಗೆಗಳಿಗೆ ಬೆನ್ನು ಕೊಡುವುದಿಲ್ಲವೆಂದು ಪ್ರಮಾಣಮಾಡಿದರು. ವೀರಾಬಾಯಿಯು ಅವರ ಆವೇಶವನ್ನೂ ದೃಢ ನಿಶ್ಚಯವನ್ನೂ ಕಂಡು ವಿಶೇಷ ಪ್ರೋತ್ಸಾಹವುಳ್ಳವಳಾಗಿ ಯುದ್ಧಕ್ಕೆ ಹೊರಟಳು. ಆಕೆಯು ತನ್ನ ಸೈನ್ಯ ಸಮೇತ ಹಸಿವುಗೊಂಡ ಹೆಣ್ಣುಸಿಂಹದ ಹಾಗೆ ಶತ್ರುಸೈನ್ಯದ ಮೇಲೆ ಅಕಸ್ಮಾತ್ತಾಗಿ ಬಿದ್ದಳು. ಆದರಿಂದ ವಿಜಯಾನಂದದಿಂದ ಓಡುತ್ತಿದ್ದ ಅಕ್ಬರನ ಸೈನ್ಯದವರು ಈ ಪ್ರಳಯಕ್ಕೆ ತಾಳಲಾರದೆ ನಾಲ್ಕು ದಿಕ್ಕಿಗೂ ಓಡಲಾರಂಭಿಸಿದರು. ಅವರನ್ನು ಹೋಗಲೀಸದೆ ಹಿಡಿದುಕೊಂಡು ವೀರಾಬಾಯಿಯ ಸೈನಿಕರು ಕಾಲಾಂತರುದ್ರರ ಹಾಗೆ ಎಲ್ಲರನ್ನೂ ಅಂತ ಹೊಂದಿಸಲಾರಂಭಿಸಿದರು. ಅವರಿಗೆ ಪ್ರೋತ್ಸಾಹಕರವಾಗಿ ವೀರಬಾಯಿಯು ತಾನೂ ಅನೇಕ ತುರುಷ್ಕರನ್ನು ವೀರಸ್ವರ್ಗಕ್ಕೆ ಕಳುಹಿಸಿದಳು. ಪ್ರಳಯ

ಗ್ನಿಯನ್ನು ಹೋಲುವ ಆಕೆಯ ಪರಾಕ್ರಮವನ್ನು ಕಂಡು ಅಕ್ಬರು ಚಕ್ರವರ್ತಿಯು ಅತ್ಯಾಶ್ಚರ್ಯವನ್ನು ಹೊಂದಿದನು. ಆತನು ಏನೂ ತೋರದೆ ನಿಶ್ಚೇಷ್ಟಿತನಾಗಿ ನಿಂತುಕೊಂಡನು. ಆಗ ಆ ಕ್ಷತ್ರಿಯವೀರರು ಉತ್ಸಾಹವಿಶಿಷ್ಟರಾಗಿ ಮ್ಲೇಚ್ಛಸೈನ್ಯಗಳನ್ನು ಅನೇಕರೀತಿಯಲ್ಲಿ ಬಾಧಿಸಲು ಯತ್ನಿಸಿದರು. ಬಾದುಷಾವು ತನಗೆ ಜಯವುಂಟಾಗುವುದಕ್ಕೆ ಬದಲಾಗಿ ಅಪಜಯವಾಗುವದನ್ನು ಕಂಡು ಮಾಡುವದೇನೋ ತೋರದೆ ಸಂಧಿಯನ್ನು ಮಾಡಿಕೊಳ್ಳುವ ಉಪಾಯವನ್ನು ಎತ್ತಿದನು. ತಕ್ಷಣವೇ ಉದಯಸಿಂಹನನ್ನು ಬಂಧವಿಮುಕ್ತನನ್ನಾಗಿ ಮಾಡಿದನು. ಪರಾಕ್ರಮವಂತೆಯಾದ ವೀರಾಬಾಯಿಯಿಂದ ಮಹಾಬಲವಂತನಾದ ಅಕ್ಬರನಂಥ ತುರುಷ್ಕ ಸಾರ್ವಭೌಮನೂ ಕೂಡ ಜಯಾಕಾಂಕ್ಷೆಯನ್ನು ಬಿಟ್ಟು ಹತಶೇಷರಾದವರನ್ನು ತೆಗೆದುಕೊಂಡು ಪುನಃ ತನ್ನಪುರಿಗೆ ಹೋಗುವವನಾದನು. ತದನಂತರ ಆ ರಜಪೂತರೆಲ್ಲರೂ ವಿಜಯಾನಂದದಿಂದ ಸಿಂಹನಾದಗಳನ್ನು ಮಾಡುತ್ತ ವೀರಾಬಾಯಿಯನ್ನು ಅನೇಕವಿಧದಲ್ಲಿ ಕೊಂಡಾಡುತ್ತ ವೀರಾಬಾಯಿಯೊಡನೆಯೂ ಉದಯಸಿಂಹನೊಡನೆಯೂ ಪುರಪ್ರವೇಶವನ್ನು ಮಾಡಿದರು. ಅದಕ್ಕೆ ಮೊದಲು ತೇಜೋಹೀನವಾಗಿದ್ದ ಚಿತ್ತೂರು ಪಟ್ಟಣವು ರಾಣಿಯ ವಿಜಯವಾರ್ತೆಯನ್ನು ಕೇಳಿ ಪುನಃ ತನ್ನ ವಿಶ್ವತೇಜವನ್ನು ಹೊಂದಿತು. ಜನಗಳೆಲ್ಲರೂ ಆ ರಜಪೂತವೀರರನ್ನೂ ರಾಜನನ್ನೂ ರಾಣಿಯನ್ನೂ ಮಂಗಳವಾದ್ಯದಿಂದ ಎದಿರ್ಗೊಂಡು ಅವರಮೇಲೆ ಪುಷ್ಪವೃಷ್ಟಿಗಳನ್ನು ಸುರಿಸುತ್ತ ರಾಜಭವನವನ್ನು ಪ್ರವೇಶಮಾಡಿದರು. ಹೀಗೆ ತನ್ನ ಜನ್ಮ

ದಲ್ಲಿಯಾವಾಗಲೂ ಯುದ್ಧವನ್ನು ತಿಳಿಯದಿದ್ದರೂ ಒಂದು ಕ್ಷಣದಲ್ಲಿ ತನ್ನ ಶೌರ್ಯದಿಂದ ವೀರಾಬಾಯಿಯು ದೊಡ್ಡ ಶೂರಸ್ತ್ರೀಯೆಂಬ ಬಿರುದನ್ನು ಹೊಂದಿ ಕೀರ್ತಿಪಡೆದಳು.

---

## ಮಹಾರಾಣಿ ಝಾನ್ಸಿ ಲಕ್ಷ್ಮೀಬಾಯಿ

---

(೧) ಭರತಖಂಡದಲ್ಲಿ ಶೌರ್ಯಮಹಿಮೆಯಲ್ಲಿ ಪ್ರಖ್ಯಾತರಾದ ಯುವತೀ ರತ್ನಗಳಲ್ಲಿ ಝಾನ್ಸೀ ಲಕ್ಷ್ಮೀಬಾಯಿಯು ಅಗ್ರಗಣ್ಯಳು. ಈಕೆಯ ಶೌರ್ಯಾಗ್ನಿಯು ೧೮೫೭ ನೇ ಸಂವತ್ಸರದವರಗೂ ಅಡಗಿದ್ದು ಆಕಸ್ಮಿಕವಾಗಿ ಪ್ರಜ್ವಲಿಸಿತು. ಈಕೆಯ ರಾಜ್ಯವು ಉತ್ತರ ಹಿಂದೂಸ್ಥಾನಕ್ಕೆ ಸೇರಿದ ಬುಂದೇಲು ಖಂಡವೆಂಬ ಪ್ರದೇಶದಲ್ಲಿ ಒಂದು ಭಾಗ. ಈ ರಾಜ್ಯವನ್ನು ಲಕ್ಷ್ಮೀಬಾಯಿಯ ಮಾವನ ಅಣ್ಣನಾದ ರಘುನಾಥರಾಯನ ಪ್ರತಾಪಕ್ಕೆ ಮೆಚ್ಚಿ ಪೂರ್ವದ ಪೂನಾಪೇಷ್ವೆಯವರು ಕೊಟ್ಟರು. ಆತನಿಗೆ ಪುತ್ರರಿಲ್ಲದ್ದರಿಂದ ಆತನ ತಮ್ಮನಾದ ಶಿವರಾಂಭಾವರನ್ನು ಅಭಿಷಿಕ್ತರನ್ನಾಗಿ ಮಾಡಿದರು. ಈ ಶಿವರಾಂಭಾವರವರ ಕಾಲದಲ್ಲಿ ಪೂನಾ ಪೇಷ್ವೆಯರ ಪ್ರತಾಪವು ಕುಗ್ಗಿದುದರಿಂದಲೂ, ಎರಡನೇ ಬಾಜೀರಾಯರ ರಾಜಕಾರ್ಯ ನಿಪುಣತ್ವ ಶೂನ್ಯತೆಯಿಂದಲೂ, ಈತನು ಅವರನ್ನು ಅತಿಕ್ರಮಿಸಿ ಸ್ವತಂತ್ರನಾದನು. ಆದರೆ ಇಷ್ಟರಲ್ಲಿ ಆಂಗ್ಲೇಯ ಪ್ರಭುತ್ವವು ಎಲ್ಲಾ ಕಡೆಗಳಲ್ಲಿಯೂ, ವ್ಯಾಪಿಸಿದ್ದರಿಂದ ಶಿವರಾಂಭಾವನು ಆಂಗ್ಲೇಯರ ಸಂಗಡ ಸಖ್ಯವನ್ನು ಮಾಡಿ ಅನೇಕವೇಳೆಗಳಲ್ಲಿ ಇಂಗ್ಲೀಷಿನವರಿಗೆ ಅನೇಕ ವಿಧ

ಗಳಲ್ಲಿ ಸಹಾಯಕನಾದನು. ಶಿವರಾಂಭಾವರವರಿಗೆ ಕೃಷ್ಣ ರಾವು, ರಘುನಾಥರಾವು, ಗಂಗಾಧರರಾವು, ಎಂಬ ಮೂರು ಜನ ಪುತ್ರರಿದ್ದರು. ಅವರಲ್ಲಿ ದೊಡ್ಡವನಾದ ಕೃಷರಾವು ತಂದೆ ಬದುಕಿದ್ದಕಾಲದಲ್ಲಿಯೇ ಮೃತಿ ಹೊಂದಿದ್ದರಿಂದ ಶಿವ ರಾಂಭಾವರ ಅನಂತರ ಆತನ ಮಗನಾದ ರಾಮಚಂದ್ರರಾ ಯನಿಗೆ ಈ ರಾಜ್ಯಾಧಿಕಾರವು ದೊರಕಿತು. ಈತನ ಪರಿ ಪಾಲನೆಯ ಕಾಲದಲ್ಲಿ ಪೇಷ್ವೆಯ ರಾಜ್ಯಾಧಿಕಾರವೆಲ್ಲಾ ಇಂ ಗ್ಲೀಷಿನವರ ಅಧೀನವಾದ್ದರಿಂದ ಝಾನ್ಸೀ ಸಂಸ್ಥಾನಾಧೀ ಶನ ಸಂಗಡ ಆಂಗ್ಲೇಯ ಪ್ರಭುತ್ವದವರಿಗೆ ವಿಶೇಷ ಸ್ನೇಹ ಭಾವವುಂಟಾಯಿತು. ಆತನು ಪುತ್ರಹೀನನಾದ್ದರಿಂದ ಆತನ ಅನಂತರ ಆತನ ಚಿಕ್ಕಪ್ಪನಾದ ರಘುನಾಥರಾಯನೂ, ಆತನ ಅನಂತರ ಆತನ ತಮ್ಮನಾದ ಗಂಗಾಧರರಾಯನೂ, ರಾಜ್ಯ ವನ್ನು ಪಾಲಿಸಿದರು. ಈಗಂಗಾಧರರಾಯನೇ ಈಚರಿತ್ರ ನಾಯಿಕೆಯ ಪತಿಯು.

ಮೋರೋಪಂತು ತಾಂಬೇ ಎಂಬ ಕರಾಡೇ ಬ್ರಾಹ್ಮಣನು ಪೂನಾನಗರದಲ್ಲಿ ವಾಸಮಾಡುತ್ತಿದ್ದನು. ಆತನಲ್ಲಿ ಎರಡನೇ ಬಾಜೀರಾಯನ ಸಹೋದರರಾದ ಚಿಮ್ಣಾ ಜಿ ಅಪ್ಪಾರವರಿಗೆ ತುಂಬ ವಿಶ್ವಾಸವೂ ಸ್ನೇಹವೂ ಉಂಟಾ ಗಿತ್ತು. ೧೮೧೮ನೇ ಸಂವತ್ಸರದಲ್ಲಿ ೮ ಲಕ್ಷ ರೂ. ಕಪ್ಪವನ್ನು ತೆಗೆದುಕೊಂಡು ಸರ್ವರಾಜ್ಯವನ್ನೂ ಇಂಗ್ಲೀಷರಿಗೆ ಕೊಡುವ ಹಾಗೆ ಪತ್ರವನ್ನು ಬರೆದುಕೊಟ್ಟು ಎರಡನೆಯ ಬಾಜೀರಾ ಯನು ಬ್ರಹ್ಮಾವರ್ತದಲ್ಲಿ ವಾಸ ಮಾಡಲು ಹೋದನು. ಆ ಸಮಯದಲ್ಲಿ ಆತನ ತಮ್ಮನಾದ ಚಿಮ್ಣಾಜಿ ಅಪ್ಪಾರವರೂ

ತಮಗೆ ದೊರಕುವ ಪಗುದಿಯನ್ನೂ, ಸೇವಕರನ್ನೂ ತೆಗದು ಕೊಂಡು ಕಾಶೀಕ್ಷೇತ್ರದಲ್ಲಿ ವಾಸಮಾಡಲು ನಿಶ್ಚಯಿಸಿ ದೊರೆ ತನದವರ ಅಜ್ಞೆಯನ್ನು ಪಡೆದು ಕಾಶಿಗೆ ಹೋದರು. ಆತನ ಪರಿವಾರದಲ್ಲಿದ್ದವನಾದ್ದರಿಂದ ಮೋರೋಪಂತುತಾಂಬೇ ಸಹಿತ ಅಲ್ಲಿಗೆ ಹೋದನು. ಈತನನ್ನೇ ಶ್ರೀಮಂತರಾದ ಅಪ್ಪಾರವರಿಗೆ ದಿವಾನನನ್ನಾಗಿಟ್ಟು ತತ್ಪ್ರೀತ್ಯರ್ಥವಾಗಿ ತಿಂಗಳಿಗ ೮೦ ರೂಪಾಯಿಗಳ ವೇತನವನ್ನು ಕೊಡುತ್ತಿದ್ದರು.

ಮೋರೋಪಂತನ ಭಾರ್ಯೆಯಾದ ಭಾಗೀರಥೀ ಬಾಯಿಯು ಸದ್ಗುಣದಲ್ಲಿಯೂ ಸೌಶೀಲ್ಯದಲ್ಲಿಯೂ ತುಂಬ ಪ್ರಖ್ಯಾತಿಯನ್ನು ಪಡೆದಳು. ಭಾರ್ಯೆಯು ಇಂಥವಳಾದ ರಿಂದಲೇ ಮೋರೋ ಪಂತರವರಿಗೆ ಸಂಸಾರಯಾತ್ರೆಯು ಬಹುಸುಖಕರವಾಗಿ ಕಳೆಯಿತು. ಆ ಭಾರ್ಯಾಭರ್ತರಿಬ್ಬರೂ ಪರಸ್ಪರಾನುರಾಗವುಳ್ಳವರಾಗಿ ಕಾಶೀಕ್ಷೇತ್ರದಲ್ಲಿ ವಾಸಿಸುತ್ತಿರಲು ಕೆಲವು ದಿನಗಳಿಗೆ ಭಾಗೀರಥೀಬಾಯಿಯು ಗರ್ಭವನ್ನು ಧರಿಸಿ ೧೮೩೫ ನೇ ಸಂವತ್ಸರದ ನವಂಬರು ೧೯ ನೇ ತಾರೀಖಿನಲ್ಲಿ ಸುಖಪ್ರಸವವಾಗಿ ಸ್ತ್ರೀ ಶಿಶುವನ್ನು ಪಡೆದಳು. ತಾಂಬೇಯವರ ಕುಲವಂಶದಲ್ಲಿ ಕಾಶೀಕ್ಷೇತ್ರದಲ್ಲಿ ಜನ್ಮಿಸಿದ ಕನ್ಯಾರತ್ನವೇ ಲಕ್ಷ್ಮೀಬಾಯಿಯು. ಜಾತಕರ್ಮನಾಮಕರಣ ಮಹೋತ್ಸವಗಳನ್ನು ಬಹು ಸಂತೋಷದಿಂದ ನಡೆಸಿ ಮೋರೋಪಂತರವರು ಆಹುಡುಗಿಯ ಹೆಸರನ್ನು ಮನೂ ಬಾಯಿಯೆಂದು ಇಟ್ಟರು. ಈ ಬಾಲಿಕೆಯು ದಿನದಿನಕ್ಕೆ ಪ್ರವೃದ್ಧಮಾನಳಾಗುತ್ತ ತನ್ನ ಮುದ್ದು ಮಾತುಗಳಿಂದಲೂ ಮನೋಹರವಾದ ಸ್ವರೂಪದಿಂದಲೂ, ಜನನೀಜನಕರನ್ನೂ

ಅವರ ಪರಿವಾರವನ್ನೂ, ತುಂಬಾ ಆನಂದಪಡಿಸುತ್ತಲಿದ್ದಳು ಇಂಥಾ ಬಾಲಿಕಾರತ್ನವು ಸಕಲ ಜನಾಹ್ಲಾದಕರವಾಗಿ ಬೆಳೆಯುತ್ತಾ ನಾಲ್ಕು ಸಂವತ್ಸರದವಳಾಗಲಾಗಿ ತನ್ಮಾತೆಯಾದ ಭಾಗೀರಥೀಬಾಯಿಯು ಪರಲೋಕಗತಳಾದಳು. ಈ ಸಮಯದಲ್ಲಿಯೇ ಅಪ್ಪಾರವರೂ, ಕೈಲಾಸಗತರಾದ್ದರಿಂದ ಮೋರೋಪಂತರವರು. ಅಲ್ಲಿಂದ ಬ್ರಹ್ಮಾವರ್ತಕ್ಕೆ ಹೋಗಲು ತಟಸ್ಥಿಸಿತು. ಅಲ್ಲಿ ಬಾಜೀರಾಯನು ಆತನನ್ನು ತುಂಬ ಪ್ರೇಮಿಸಿ ಕುಟುಂಬಸಂರಕ್ಷಣೆಯನ್ನು ಮಾಡು ತ್ತಿದ್ದನು.

(೪) ಮನೂಬಾಯಿಗೆ ಬಾಲ್ಯದಲ್ಲಿಯೇ ಜನನೀವಿಯೋಗವು ಪ್ರಾಪ್ತಿಸಿದ್ದರಿಂದ, ಆಕೆಯು ತಂದೆಯ ಪೋಷಣೆಯಲ್ಲಿಯೇ ಇರುತ್ತ ಯಾವಾಗಲೂ ಆತನನ್ನು ಬಿಡದೆ ಪುರುಷರಲ್ಲಿಯೇ ಸದಾ ತಿರುಗುತ್ತಿದ್ದಳು. ತಾಯಿ ಇಲ್ಲದ ಹುಡುಗಿಯಾದ್ದರಿಂದಲೂ, ಸುಸ್ವರೂಪ ಮಧುರಭಾಷಿಣಿಯಾದ್ದರಿಂದಲೂ, ಶ್ರೀಮಂತರ ಹತ್ತಿರ ಇದ್ದವರೆಲ್ಲರೂ ಮನೂಬಾಯಿಯನ್ನು ತುಂಬಾ ಆದರಿಸುತಲಿದ್ದರು. ಪೇಷ್ವೆಯ ದತ್ತ ಪುತ್ರರಾದ ನಾನಾಸಾಹೇಬ ರಾವುಸಾಹೇಬು ಆ ಕಾಲದಲ್ಲಿ ಬಾಲಕನಾದ್ದರಿಂದ ಅವನ ಸಂಗಡ ಈಹುಡುಗಿಯು ಯಾವಾಗಲೂ ಎಡೆಬಿಡದ ಇರುತ್ತಿದ್ದಳು. ನಾನಾಸಾಹೇಬನು ಏನು ಕಲಿತರೆ ಅದನ್ನು ಮನೂಬಾಯಿಯು ಕಲಿಯುತ್ತ ಅವರಿಬ್ಬರು ಅಣ್ಣ ತಂಗಿಯರ ಹಾಗೆ ಕರೆಯುತ್ತಲಿದ್ದರು. ಓದು, ಅಶ್ವಾರೋಹಣ, ಖಡ್ಗವನ್ನು ತಿರುಗಿಸುವುದು, ಮೊದಲಾದವನ್ನೆಲ್ಲಾ ಮನೂಬಾಯಿಯು ನಾನಾಸಾಹೇಬನ

ಸಂಗಡ ಕಲಿತುಕೊಂಡಳು. ಈಕೆಯ ಸ್ವಭಾವವು ಬಾಲ್ಯ ದಿಂದಲೂ ಶೌರ್ಯಗುಣ ಪ್ರಧಾನವಾಗಿತ್ತು. ಇದಕ್ಕೆಲ್ಲಕ್ಕೂ ಕ್ಷತ್ರಿಯಾಗ್ರಗಣ್ಯ ಗುಣಗಳುಳ್ಳ ಶೂರರ ಸಂಸರ್ಗವೇ ಕಾ ರಣ. ಇದರಿಂದ ಸ್ತ್ರೀಯರು ಸ್ವಭಾವದಿಂದಲೇ ಪಿರಕಿಯ ವರೆಂದೂ, ಅವರಿಗೆ ಶೌರ್ಯ ಧೈರ್ಯಗಳು ಯಾವ ವಿಧದ ಲ್ಲಿಯೂ ಉಂಟಾಗಲಾರವೆಂದೂ, ವಾದಿಸುವ ವಿದ್ವಾಂಸರಿಗೆ ಸಂಶಯನಿವೃತ್ತಿಯುಂಟಾಗದಿರದು. ಸ್ತ್ರೀಯರಿಗೂ ಪುರುಷ ರ ಹಾಗೆಯೇ ಬಾಲ್ಯದಿಂದಲೂ ಎಂತಹ ಸಂಸ್ಕರಣವು ಉಂಟಾ ಗುವುದೋ ಅಂಥ ಗುಣಗುಣಗಳೇ ಹಬ್ಬುವವೆಂದು ಸಿದ್ಧ ವಾಗುವುದು.

(೫) ಹೀಗಿರಲಾಗಿ ಒಂದು ದಿನ ಆಕಸ್ಮಿಕವಾಗಿ ಝಾಸೀ ಸಂಸ್ಥಾನದಿಂದ ಜ್ಯೋತಿಷ್ಕನಾದ ತತ್ಯದೀಕ್ಷಿತನು ಬಾಜೀ ರಾಯನನ್ನು ಸಂದರ್ಶಿಸಲು ಬಂದನು. ಆ ದೀಕ್ಷಿತನ ಸಂಗಡ ಸಂದರ್ಭಾನುಸಾರವಾಗಿ ಮೋರೋ ಪಂತರು ಝಾ ಸೀ ಕಡೆ ನಮ್ಮ ಹುಡುಗಿಗೆ ವರನು ದೊರಕುವನೆ? ಎಂದು ವಿಚಾರಿಸಿದರು. ಅದಕ್ಕೆ ಆತನು "ಝಾಸೀ ಸಂಸ್ಥಾನಾ ಧೀಶ್ವರನಾದ ಗಂಗಾಧರರಾವು ಬಾಬಾ ಸಾಹೇಬರವರಿಗೆ ಪ್ರಥಮ ಪತ್ನಿಯಾದ ರಮಾಬಾಯಿಯು ಕಾಲಧರ್ಮವನ್ನು ಹೊಂದಿದಳು. ಆದ್ದರಿಂದ ನಿನ್ನ ಕುಮಾರಿತಿಗೆ ಆಸಂಬಂಧ ವನ್ನು ವಿಚಾರಿಸು" ಎಂದು ಹೇಳಿದನು. ತದನಂತರ ಈ ವಿಷಯವನ್ನು ಕುರಿತು ಬಾಜೀರಾವು ಗಂಗಾಧರರಾಯನಿಗೆ ತಿಳಿಸಲಾಗಿ ಆತನು ಸಮ್ಮತಿಸಿದನು, ಲಗ್ನ ನಿಶ್ಚಯವಾದ ತರುವಾಯ ಕೆಲವರು ಆಪ್ತರ ಸಂಗಡ ಮೋರೋ ಪಂತರ

ವರು ಝಾನ್ಸಿಗೆ ಹೊರಟರು. ಅಲ್ಲಿಯೇ ೧೮೪೨ ನೇ ಸಂವತ್ಸರದಲ್ಲಿ ಮನೂಬಾಯಿಯು ವಿವಾಹವು ತುಂಬಾ ವೈಭವದಿಂದ ನಡೆಯಿತು. ವಿವಾಹಾನಂತರದಲ್ಲಿ ದೇಶಾಚಾರ ಪ್ರಕಾರ ಅತ್ತೆಮನೆಯವರು ಆ ಹುಡುಗಿಗೆ "ಲಕ್ಷ್ಮೀಬಾಯಿ"ಯೆಂದು ಹೆಸರನ್ನು ಇಟ್ಟರು. ಪೇಶವೆಯವರಾದ ಮೋರೋಪಂತು ತಾಂಬೇಯವರಿಗೆ ೩೦೦ ರೂಪಾಯಿಗಳ ವೇತನವನ್ನು ಕೊಟ್ಟು ಗಂಗಾಧರರಾಯರು ತಮ್ಮ ಆಸ್ಥಾನದಲ್ಲಿ ಒಬ್ಬ ಸರದಾರನನ್ನಾಗಿ ಇಟ್ಟುಕೊಂಡದ್ದರಿಂದ ಲಕ್ಷ್ಮೀಬಾಯಿಯು ಪುನಃ ಬ್ರಹ್ಮಾವರ್ತಕ್ಕೆ ಹೋಗಲು ಅವಕಾಶವಾಗಲಿಲ್ಲ. ಗಂಗಾಧರರಾಯರ ಅಣ್ಣಂದಿರಾದ ರಘುನಾಥರಾಯರವರ ಪರಿಪಾಲನೆಯಲ್ಲಿ ರಾಜ್ಯವು ವಿಶೇಷ ದುಸ್ಥಿತಿಗೆ ಬಂದದ್ದರಿಂದ ಆ ರಾಜ್ಯಾಧಿಕಾರವನ್ನು ಪೂರ್ಣವಾಗಿ ದೊರೆತನದವರೇ ಸ್ವಾಧೀನಪಡಿಸಿಕೊಂಡು ರಾಜ್ಯಕ್ಕೆ ಉಂಟಾದ ಋಣಗಳನ್ನು ತೀರಿಸುತ್ತಲಿದ್ದರು. ಲಕ್ಷ್ಮೀಬಾಯಿಯು ವಿವಾಹಾನಂತರ ಗಂಗಾಧರರಾಯರ ಯೋಗ್ಯತೆಯನ್ನು ಕಂಡು ಬುಂದೇಲುಖಂಡದ ಪೊಲಿಟಿಕಲ್ ಏಜಂಟರಾದ ಕರ್ನಲ್ ಸ್ಲೀಮನ್ ದೊರೆಯವರು ಸರ್ವರಾಜ್ಯಪಾಲನವನ್ನೂ ಗಂಗಾಧರರಾಯರ ಸ್ವಾಧೀನಪಡಿಸಿದರು

(೬) ಗಂಗಾಧರರಾಯರು ತನ್ನ ಪ್ರಜೆಗಳನ್ನು ಸುಖಿಗಳನ್ನಾಗಿ ಮಾಡಲು ನಿಶ್ಚಯಿಸಿ ರಾಜ್ಯವನ್ನು ಬಹಳ ನಿಪುಣತೆಯಿಂದ ಪಾಲಿಸುತ್ತಲಿದ್ದರು. ಈತನ ಕಾಲದಲ್ಲಿ ಸಾಲವೆಲ್ಲವೂ ತೀರಿ ಭಂಡಾರದಲ್ಲಿ ಧನವು ದಿನದಿನವೂ ವೃದ್ಧಿ ಹೊಂದುತ್ತಿತ್ತು ಪ್ರಜೆಗಳು ತುಂಬಾ ಸುಖಿಗಳಾಗಿದ್ದು ಸದಾ ರಾಜನನ್ನೂ, ರಾಣಿಯನ್ನೂ ಹೊಗಳುತ್ತಿದ್ದರು.

(೭) ಹೀಗೆ ಕೆಲವುದಿನಗಳು ಸೌಖ್ಯದಲ್ಲಿ ಕಳೆದ ತರುವಾಯ ಲಕ್ಷ್ಮೀಬಾಯಿಗೆ ದುಃಖಕ್ಕೆ ಪ್ರಾರಂಭವಾಯಿತು. ಆಕೆಗೆ ಒಬ್ಬ ಪುತ್ರನು ಹುಟ್ಟಿ ಮೂರು ಮಾಸಗಳು ಜೀವಿಸಿ ಮೃತಿ ಹೊಂದಿದನು. ಗಂಗಾಧರರಾವು ಮಹಾರಾಜರವರ ಮನಸ್ಸಿನಲ್ಲಿ ಪುತ್ರಶೋಕವು ಅಧಿಕವಾದ್ದರಿಂದ ಈತನು ದಿನದಿನಕ್ಕೆ ಕ್ಷೀಣಿಸುತ್ತಾ, ವೈದ್ಯೋಪಚಾರಗಗಳಿಂದ ಮಧ್ಯೆ ಸ್ವಸ್ಥಪಡುತ್ತಿದ್ದನು. ಹೀಗೆ ಕೆಲವು ದಿನಗಳು ಕಳೆದ ತರುವಾಯ ೧೮೫೩ ನೇ ಸಂವತ್ಸರದ ಅಕ್ಟೋಬರು ತಿಂಗಳಿಂದಲೂ ಆತನ ಶರೀರವು ಮತ್ತಷ್ಟು ಕ್ಷೀಣವಾಗುತ್ತ ಬಂತು ಅನೇಕ ರಾಜವೈದ್ಯರು ಸದಾ ಸಮೀಪದಲ್ಲಿದ್ದುಕೊಂಡು ಔಷಧೋಪಚಾರಗಳನ್ನು ಮಾಡುತ್ತಲಿದ್ದರು. ಆದರಿಂದ ಎಷ್ಟುಮಾತ್ರವೂ ಸುಗುಣವು ಕಾಣಬರುವ ಮಾರ್ಗವು ತೋರದೆಹೋಯಿತು. ನವಂಬರು ೧೫ ನೇ ತಾರೀಖಿನಿಂದ ಗಂಗಾಧರರಾಯರ ಪ್ರಕೃತಿಯಲ್ಲಿ ವಿಕಾರ ಚೇಷ್ಟೆಗಳು ಅನೇಕವಾಗಿ ಕಾಣಿಸುತ್ತಾ ಬಂದವು. ಅದರಿಂದ ಸಂಸ್ಥಾನದ ಮಂತ್ರಿಯಾದ ನರಸಿಂಹರಾಯನೂ, ಮೋರೋಪಂತು ತಾಂಬೇಯುವರೂ, ಕೂಡಿ ಮುಂದೆ ನಡೆಯಬೇಕಾದ ಸಂಸ್ಥಾನವ್ಯವಸ್ಥೆಯನ್ನು ಕುರಿತು ಮಹಾರಾಜರ ಸಂಗಡ ಮಾತನಾಡಿದರು. ಅವರ ಪ್ರಸಂಗವನ್ನು ಕೇಳಿದ ಮೇಲೆ ತನಗೆ ಈಗಲೇ ರೋಗವು ಅಸಾಧ್ಯವಾಗಿಲ್ಲವೆಂದೂ, ಮುಂದೆ ಅಸಾಧ್ಯವಾಗುವ ಪಕ್ಷದಲ್ಲಿ ತಮ್ಮ ವಂಶದಲ್ಲಿನ ಆನಂದರಾಯನನ್ನು ತಮಗೆ ದತ್ತುಪುತ್ರನನ್ನಾಗಿ ಮಾಡಿ ಅನಂತರ ಆ ಹುಡುಗನು ಸ್ವರಾಜ್ಯಭಾರ ವಹಿಸಲು

ವವರೆಗೂ ಅವನ ಹೆಸರಿನಲ್ಲಿ ಲಕ್ಷ್ಮೀಬಾಯಿಯೇ ರಾಜ್ಯ ವನ್ನು ಪಾಲಿಸಬೇಕೆಂದೂ, ಹೇಳಿದನು. ಅದರ ಮೇಲೆ ಅವರೆಲ್ಲರೂ ಆ ಕ್ಷಣದಲ್ಲಿಯೇ ಮುಹೂರ್ತವನ್ನು ನಿಶ್ಚಯಿಸಿ ಜಾಗ್ರತೆಯಾಗಿಯೇ ಶಾಸ್ತ್ರೋಕ್ತವಾಗಿ ದತ್ತು ವಿಧಿಯನ್ನು ನಡಿಸಿದರು. ಆ ಮಹೋತ್ಸವಕ್ಕೆ ಝಾಂಸಿಯಲ್ಲಿನ ಅನೇಕ ಮುಖ್ಯಸ್ಥರನ್ನು ಕರೆಸಿದರು. ಅವರ ಸಂಗಡ ಬುಂದೇಲಖಂಡದ ಪೊಲಿಟಿಕಲ್ ಅಸಿಸ್ಟೆಂಟ್ ಏಜಂಟರಾದ ಮೇಜರ್ ಎಲೀಸು ದೊರೆಯವರನ್ನೂ ಸೇನಾಪತಿಯಾದ ಕೇಪ್ಟನ್ ಮಾರ್ಟಿನ್ ದೊರೆಯವರನ್ನೂ ಕರೆಸಿದರು. ಇವರೆಲ್ಲರ ಸಮ್ಮುಖದಲ್ಲಿಯೇ ದತ್ತು ವಿಧಾನವನ್ನು ಜರುಗಿಸಿ ಆನಂದರಾಯನ ಹೆಸರನ್ನು "ದಾಮೋದರರಾಯ" ನೆಂದು ಇಟ್ಟರು.

೮. ಹೀಗೆ ದತ್ತು ವಿಧಾನವು ನಡೆದ ಮೇಲೆ ಗಂಗಾಧರರಾಯರು ದಿವಾನರಿಂದ ಒಂದು ವಿಜ್ಞಾಪನಪತ್ರವನ್ನು ಹಿಂದೂಸ್ಥಾನದ ದೊರೆತನದವರಿಗೆ ಬರಿಸಿ ಅದರ ಮೇಲೆ ತಮ್ಮ ಸೈನ್ ಮಾಡಿ ಅದನ್ನು ತಮ್ಮ ಹಸ್ತದಿಂದ ಪೊಲಿಟಿಕಲ್ ಅಸಿಸ್ಟೆಂಟರವರಿಗೆ ಕೊಟ್ಟರು ಅದರಲ್ಲಿ ಪೂರ್ವದಲ್ಲಿ ಇಂಗ್ಲಿಷಿನವರು ತನ್ನ ತಂದೆಯವರೊಡನೆ ಮಾಡಿದ ಕರಾರುಪ್ರಕಾರ ತಮ್ಮ ವಂಶಪಾರಂಪರ್ಯವಾಗಿ ರಾಜ್ಯವು ದೊರಕಬೇಕೆಂದೂ, ತನಗೆ ಔರಸ ಸಂತತಿಯು ಇಲ್ಲದ್ದರಿಂದ ದತ್ತುವಾಗಿ ಒಬ್ಬ ಬಾಲನನ್ನು ಸ್ವೀಕರಿಸಿದೆನೆಂದೂ ದೊರೆತನದವರು ಆ ದತ್ತುವಿಧಾನಕ್ಕೆ ಸಮ್ಮತಿಸಿ ಅವನಿಗೆ ರಾಜ್ಯವನ್ನು ಕೊಟ್ಟು ಅವನು ದೊಡ್ಡವನಾಗುವವರೆಗೂ ಅವನ ಹೆಸರಿನಲ್ಲಿ ತನ್ನ ಪತ್ನಿಯಾದ ಲಕ್ಷ್ಮೀಬಾಯಿಯು ಪಾಲಿಸುವಹಾಗೆ ಮಾಡಬೇಕೆಂದೂ, ಬರೆದರು. ವಿಜ್ಞಾ

ಪನಪತ್ರಿಕೆ ಬರೆಸಿದ ದಿನವೇ ಗಂಗಾಧರರಾಯರು ಪರಲೋಕಗತರಾದರು. ಕುಲಾಚಾರಪ್ರಕಾರವಾಗಿ ರಾಜರವರಿಗೆ ಪ್ರೇತವಿಧಿಗಳೆಲ್ಲವೂ ನಡೆಸಲ್ಪಟ್ಟವು. ತದನಂತರದಲ್ಲಿ ಕೆಲವು ದಿನಗಳಿಗೆ ಲಕ್ಷ್ಮೀಬಾಯಿಯು ಸರ್ವಾನುಮತವಾಗಿ ತನ್ನ ದತ್ತು ಮಗನಿಗೆ ರಾಜ್ಯ ಕೊಡಬೇಕೆಂದು ಒಂದು ವಿಜ್ಞಾಪನಾಪತ್ರಿಕೆಯನ್ನು ಬರೆದಳು. ಆದರೆ ಆಕೆಯ ಉದ್ದೇಶವು ಸಿದಿ ಸಲಿಲ್ಲ.

೯. ಆ ವಿಜ್ಞಾಪನೆಯ ಪ್ರಕಾರ ದೊರೆತನದವರು ತಮ್ಮ ದತ್ತುವನ್ನು ಸ್ವೀಕರಿಸಿ ರಾಜ್ಯವನ್ನು ಕೊಡುವರೆಂದು ಝಾಂಸಿ ಸಂಸ್ಥಾನದಲ್ಲಿ ಎಲ್ಲರೂ ಬೆಟ್ಟದಷ್ಟು ಆಶೆಯಿಂದ ಇರಲಾಗಿ ೧೮೫೪ ನೇ ಸಂವತ್ಸರದ ಮಾರ್ಚಿ ತಿಂಗಳು ೨೪ ನೇ ತಾರೀಖಿನಲ್ಲಿ ದತ್ತು ವಿಧಾನವನ್ನು ದೊರೆತನದವರು ಅಂಗೀಕರಿಸವೆ ರಾಜ್ಯವನ್ನು ತಾವೇ ಸ್ವಾಧೀನಪಡಿಸಿಕೊಂಡರೆಂಬ ಸಂಗತಿಯು ತಿಳಿಯಿತು. ಆದ್ದರಿಂದ ಲಕ್ಷ್ಮೀಬಾಯಿಗೆ ಪತಿವಿಯೋಗದ ದುಃಖದ ಜತೆಗೆ ರಾಜ್ಯವಿಯೋಗದ ವ್ಯಸನವೂ ಸಂಪ್ರಾಪ್ತವಾಯಿತು. ದೊರೆತನದವರು ಆ ರಾಜ್ಯವನ್ನು ತಾವು ಸ್ವಾಧೀನಪಡಿಸಿಕೊಂಡು ಪಶ್ಚಿಮೋತ್ತರ ಪರಗಣಾ ಗೌರ್ನರವರಿಗೆ ಅಲ್ಲಿನ ರಾಜ್ಯವನ್ನು ನಡಿಸುವಹಾಗೆ ಅಪ್ಪಣೆಯನ್ನು ಕೊಟರು. ಅವರು ರಾಜ್ಯವನ್ನು ಸ್ವಾಧೀನಪಡಿಸಿಕೊಂಡು ರಾಜ್ಯಕ್ಕೂ, ರಾಜ್ಯಕುಟುಂಬಕ್ಕೂ ಹೀಗೆ ಕಟ್ಟುಕಾಯಿದೆಯನ್ನು ಮಾಡಿದರು.

೧೦. ಗ್ರಾಮದಲ್ಲಿದ್ದ ರಾಜಭವನವನ್ನು ರಾಣಿಯವರಿಗೆ ಇರುವುದಕ್ಕೆ ಕೊಟ್ಟು ಕೋಟೆಯನ್ನು ತಾವು ತೆಗೆದುಕೊಂಡರು. ರಾಣಿಗೆ ಉಂಟಾದ ಧನದಲ್ಲಿ ಸ್ವಲ್ಪ ಕೊಟ್ಟು

ಮಿಕ್ಕಿದ್ದ ಸಂಸ್ಥಾನದಲ್ಲಿ! ನನಗಗಳು ಮೊದಲಾದ ಧನವೆಲ್ಲವನ್ನು ದತ್ತುಪುತ್ರನಿಗೆ ಮೈನಾರಿಟಿಯು ತೀರಿದಮೇಲೆ ಕೊಡುವುದಕ್ಕಾಗಿ ಹತ್ತಿರವೇ ಇಟ್ಟುಕೊಂಡರು. ರಾಣಿಯು ಜೀವಿಸಿರುವವರೆಗೂ ೫೦೦೦ ರೂಪಾಯಿಗಳು ಆಕೆಗೆ ತಿಂಗಳುವೇತನವಾಗಿ ಏರ್ಪಡಿಸಿ ಅದುವರೆಗೂ ಆಕೆಯ ಮೇಲಾಗಲಿ ಆಕೆಯ ಇತರ ಭೃತ್ಯವರ್ಗದ ಮೇಲೆಯಾಗಲಿ ತಮ್ಮ ಕರಾರು ನಡೆಯಕೂಡದೆಂದು ಬರೆದುಕೊಟ್ಟರು.

೧೧. ಅದಕ್ಕೆ ಮುಂಚೆ ರಾಣಿಯು ಸೈನಿಕರಿಗೆ ವಿಶ್ರಾಂತಿಯುಂಟಾಗುವಹಾಗೆ ಮಾಡಿ ಅವರಿಗೆ ಬದಲಾಗಿ ತಮ್ಮ ಸೇನೆಯನ್ನಿಟ್ಟರು. ರಾಣಿಗೆ ೫೦೦೦ ರೂಪಾಯಿಗಳ ವೇತನವನ್ನು ಕೊಡುವೆವೆಂದು ದೊರೆತನದವರು ಬರೆದಿದ್ದರಿಂದ ತಮ್ಮ ರಾಜ್ಯವು ತಮಗೆ ದೊರಕಬೇಕೆಂಬ ಇಚ್ಛೆಯುಳ್ಳ ರಾಣಿಯು ಆ ಅಲ್ಪಜೀತವನ್ನು ಮರಣಪರಿಯಂತರವೂ ಸ್ವೀಕರಿಸಲಿಲ್ಲ. ಆಗ ಸುಮ್ಮನಿರದೆ ಲಕ್ಷ್ಮೀಬಾಯಿಯು ಸೀಮೆಯಲ್ಲಿ ಅಪೀಲುಮಾಡಲು ಯೋಚಿಸಿ, ಉಮೇದಚಂದ್ರಬಾನರ್ಜೀ ಎಂಬ ವಂಗದೇಶೀಯನನ್ನೂ ಮತ್ತೊಬ್ಬ ಅಂಗ್ಲೀಯಪ್ಲೀಡರನನ್ನೂ ಆರುಲಕ್ಷರೂಪಾಯಿಗಳನ್ನು ಕೊಟ್ಟು ಇಂಗ್ಲಂಡಿಗೆ ಕಳುಹಿಸಿದಳು. ಆದರೆ ಅವರು ಅಲ್ಲಿಗೆ ಹೋಗಿ ಏನು ಮಾಡಿದ್ದೊ, ಎಲ್ಲಿರುವುದೂ, ಇದುವರೆಗೂ ತಿಳಿಯಲಿಲ್ಲ. ಅವರು ಅಲ್ಲಲ್ಲಿ ಅನೇಕೋಪಾಯಗಳನ್ನು ಮಾಡುವರೆಂದೂ, ಅವರ ಪ್ರಯತ್ನಗಳಿಂದ ತನಗೆ ರಾಜ್ಯವು ಪುನಃ ಪ್ರಾಪ್ತವಾಗುವದೆಂದೂ ರಾಣಿಗೆ ತುಂಬಾ ನಂಬಿಕೆಯು ಇತ್ತು.

೧೨. ೧೮೫೫ ನೇ ಸಂವತ್ಸರದಲ್ಲಿ ದಾಮೋದರರಾ

ಯರಿಗೆ ಉಪನಯನವನ್ನು ಮಾಡಬೇಕೆಂದು ನಿಶ್ಚಯಿಸಿ ಆ ಹುಡುಗನ ಹೆಸರಿನಲ್ಲಿ ದೊರೆತನದವರು ಇಟ್ಟಿದ್ದ ಆರುಲಕ್ಷ ರೂಪಾಯಿಯಲ್ಲಿ ಒಂದು ಲಕ್ಷರೂಪಾಯಿಗಳನ್ನು ಕೊಡಿರೆಂದು ರಾಣಿಯು ದೊರೆತನದವರನ್ನು ಕೇಳಿದಳು. ಅದಕ್ಕೆ ಅವರು ನೀನು ತೆಗೆದುಕೊಳ್ಳಬೇಕಾಗಿದ್ದರೆ ಯಾರನ್ನಾದರೂ ಜಾಮೀನು ಇಟ್ಟಹೊರತು ಕೊಡುವದಕ್ಕಾಗುವದಿಲ್ಲ ಎಂದು ಹೇಳಲಾಗಿ ಅದೇಪ್ರಕಾರ ಅವರು ಕೋರಿದವರನ್ನು ಜಾಮೀನು ಇಟ್ಟು ಒಂದುಲಕ್ಷರೂಪಾಯಿಗಳನ್ನು ತೆಗೆದುಕೊಂಡು ಆ ಸಂವತ್ಸರ ಮಾಘಮಾಸದಲ್ಲಿ ಮಹಾವೈಭವದಿಂದ ಕುಮಾರನ ಉಪನಯನವನ್ನು ಮಾಡಿದಳು.

೧೩. ಹೀಗೆ ರಾಣಿಯು ಅತ್ಯಂತದುಃಖದಿಂದ ಕಾಲವನ್ನು ಕಳೆಯುತ್ತಿರಲಾಗಿ ೧೮೫೭ ನೇ ಸಂವತ್ಸರದಲ್ಲಿ ಹಿಂದೂ ಪಟಾಲವು ಇಂಗ್ಲಿಷಿನವರ ಮೇಲೆ ತಿರುಗಿಬೀಳುವ ಭಯಂಕರವಾದ ಕಾಲವು ಪ್ರಾಪ್ತವಾಯಿತು. ಈ ಯುದ್ಧವು ಇತಿಹಾಸಸಿದ್ಧವಾದ್ದರಿಂದ ಇತಿಹಾಸಜ್ಞರಿಗೆಲ್ಲರಿಗೂ ವಿದಿತವೇ !

೧೪. ಪಟಾಲಂಗಳು ತಿರುಗಿಬಿದ್ದವರ್ತಮಾನವು ಝಾನ್ಸಿಯಲ್ಲಿನ ಹಿಂದೂಪಟಾಲಕ್ಕೆ ತಿಳಿದು ಅದುವರೆಗೆ ಅಡಗಿದ್ದ ದ್ವೇಷಾಗ್ನಿಯು ಪ್ರಜ್ವಲಿಸಲಾಗಿ ಜೂನ್ ತಿಂಗಳು ಒಂದನೇತಾರೀಖಿನಲ್ಲಿ ಅವರು ತಿರುಗಿಬೀಳುವುದಕ್ಕೆ ಪ್ರಾರಂಭಿಸಿದರು. ಅವರ ಸೇನಾನಾಯಕನು ಅವರನ್ನು ಸನ್ಮಾರ್ಗಕ್ಕೆ ತಿರುಗಿಸಲು ಎಷ್ಟು ಪ್ರಯತ್ನಿಸಿದರೂ ಅವರು ತಿರುಗದೆ ಹೋದರು. ಅದನ್ನು ಕಂಡು ಅವನು ಗ್ರಾಮದಲ್ಲಿ ಇಂಗ್ಲೀಯರನ್ನೆಲ್ಲಾ ತುಂಬಾಭದ್ರವಾದ ಕಿಲ್ಲೆಯೊಳಗೆ ಹೋಗುವ

ಹಾಗೆ ತಿಳಿಸಲಾಗಿ ಅವರು ಅದೇಪ್ರಕಾರ ಅಲ್ಲಿಗೆ ಹೋಗಿ ಕೋಟೆಯ ದ್ವಾರಗಳನ್ನು ಮುಚ್ಚಿಕೊಂಡರು. ಆದರೆ ಮಾರನೇದಿನದಲ್ಲಿಯೇ ಆ ತಿರುಗಿಬಿದ್ದ ಪಟಾಲದವರು ಸೈನ್ಯದಲ್ಲಿ ಮುಖ್ಯಸ್ಥನನ್ನು ಕೊಂದು ಸಂತೋಷ ಉಬ್ಬಿ ಕಿಲ್ಲೆಯನ್ನು ಸುತ್ತು ಬಳಸಿಕೊಂಡು ಬಹು ಪ್ರಯತ್ನದಿಂದ ಅಲ್ಲಿನವರನ್ನು ಹೊರಕ್ಕೆ ಹೊರಡಿಸಿ ಅತಿಕ್ರೂರರಾಗಿ ಅವರನ್ನೆಲಾ ಒಂದೇಕ್ಷಣದಲ್ಲಿಯೇ ಯಮಸದನಕ್ಕೆ ಕಳುಹಿಸಿದರು. ಅವರು ಹಾಗೆ ಆ ಊರಲ್ಲಿ ಒಬ್ಬ ಆಂಗ್ಲೇಯ ಶಿಶುವು ಸಹಿತ ಇಲ್ಲದಂತೆಮಾಡಿ, ಝಾಸೀರಾಜ್ಯವು ಮಹಾರಾಣಿಯದೆಂದು ಧ್ವಜವನ್ನು ಎತ್ತಿದರು. ಅಂದಿನಿಂದ ರಾಣಿಯು ಪಟಾಲದ ಸಂಗಡ ಬೆರದು ಸ್ವತಂತ್ರವಾಗಿ ಝಾಸೀಸಂಸ್ಥಾನದಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಲು ಯತ್ನಮಾಡಿದಳು ಆ ನಾಲ್ಕುದಿನಗಳಾದರೂ ರಾಣಿಯು ರಾಜ್ಯವ್ಯವಸ್ಥೆಯನು ತುಂಬಾ ನಿಪುಣತೆಯಿಂದ ಮಾಡಿದಳು. ಆಕೆಯು ತನ್ನ ಜಾಣ್ಮೆಯಿಂದಲೇ ಯಾವ ಕೆಲಸಕ್ಕೆ ಯಾರು ಯೋಗ್ಯರೋ ಆ ಕೆಲಸಗಳಿಗೆ ಅವರುಗಳನ್ನು ನಿಯಮಿಸಿದಳು. ಆದರೆ ಪೂರ್ವದಲ್ಲಿದ್ದ ಉದ್ಯೋಗಸ್ಥರನ್ನು ದೊರೆತನದವರು ಅದುವರೆವಿಗೆ ತೆಗೆದುಹಾಕಿದ್ದರಿಂದ ರಾಣಿಗೆ ತಕ್ಕ ಉದ್ಯೋಗಸ್ಥರು ಆ ಸಮಯದಲ್ಲಿ ದೊರಕದೆ ಇದ್ದರು. ಆದರೂ ಆಕೆಯು ತನ್ನಿಂದ ಆಗುವವರೆಗೂ ಸಿದ ಪಡಿಸಿ ದುರ್ಗಸಂರಕ್ಷಣೆಯ ನಿಮಿತ್ತವಾಗಿ ಹೊಸಸೈನ್ಯವನ್ನು ಸಿದ್ಧಮಾಡಿದಳು

೧೫. ಝಾಸೀ ರಾಜ್ಯವನ್ನು ಮಹಾರಾಣಿ ಲಕ್ಷ್ಮೀಬಾಯಿ ಪಾಲಿಸುತಿದ್ದ ಸಂಗತಿಯನ್ನು ಕೇಳಿ, ಅವರ ವಂಶದವನಾದ ಸದಾಶಿವರಾಯನೆಂಬುವನು ಝಾಸೀ ಸಮೀಪ

ದಲ್ಲಿದ್ದ ಕರೇರಾ ಎಂಬ ದುರ್ಗವನ್ನು ವಶಮಾಡಿಕೊಂಡು, ಅಲ್ಲಿ ತಾನು ಝಾಸೀ ರಾಜ್ಯಾಭಿಷೇಕವನ್ನು ಮಾಡಿಕೊಂಡನು. ಆ ಅಬಲೆಯಾದ ರಾಣಿಯು ರಾಣಿವಾಸದಲ್ಲಿದ್ದವಳಾದ್ದರಿಂದ ಆಕೆ ತನಗೆ ಸ್ವಾಧೀನವಾಗುವಳೆಂದು ತಿಳಿದನು. ಆದರೆ ರಾಣಿಯು ಸಬಲಳಾಗಿ ಸೈನ್ಯವನ್ನು ಕಳುಹಿಸಿ ಆತನನ್ನು ಹಿಡಿದುತರಿಸಿ ಝಾಸೀ ಕಿಲ್ಲೆಯಲ್ಲಿ ಬಂಧಿಸಿದ್ದಳು.

೧೬. ಹೀಗೆ ಒಬ್ಬ ಶತ್ರುವನ್ನು ಹಿಡಿಯುವುದರೊಳಗಾಗಿ ಎರಡನೆ ಶತ್ರುವು ಉತ್ಪನ್ನವಾದನು. ಝಾಸೀಗೆ ಸಮೀಪದಲ್ಲಿದ್ದ ಓರಛಾ ಸಂಸ್ಥಾನದ ದಿವಾನನು, ನಥೇಖಾ ಎಂಬುವನು, ವಿಶೇಷ ಸೈನ್ಯದ ಸಂಗಡ ದಾರಿ ನಡೆದು ರಾಣಿಯವರಿಗೆ ಹೀಗೆ ವರ್ತಮಾನವನ್ನು ಕಳುಹಿಸಿದನು. "ನಿಮಗೆ ಇದುವರಿಗೆ ಆಂಗ್ಲೇಯ ಪ್ರಭುಗಳು ಕೊಡುವ ಜೀತವನ್ನು ನಾವು ಕೊಡುವೆವು. ಆದ್ದರಿಂದ ರಾಜ್ಯವನ್ನು ನಮ್ಮ ಸ್ವಾಧೀನವನ್ನು ಮಾಡಿರಿ" ಈ ವಾರ್ತೆಯನ್ನು ಕೇಳಿ ರಾಣಿಯ ಪ್ರಧಾನ ಸಾಮಂತರೆಲ್ಲರೂ ಭಯಭೀತರಾಗಿ ನಮಗೆ ಕಾಣಿಕೆಯನ್ನು ಕೊಡುವ ಪಕ್ಷದಲ್ಲಿ ಸಂಗ್ರಾಮದಿಂದ ಕೆಲಸವಿಲ್ಲವೆಂದೂ, ಅವರ ಸಂಗಡ ಯುದ್ಧಮಾಡಿ ಗೆಲ್ಲುವದು ಸಾಧ್ಯವಲ್ಲವೆಂದೂ ಹೇಳಿದರು. ಆದರೆ ಅಸಾಮಾನ್ಯ ಶೌರ್ಯವುಳ್ಳ ರಾಣಿಯು ಅವರ ಮಾತುಗಳನ್ನು ಕೇಳದೆ, ಆ ಶತ್ರುಗಳಿಗೆ ಹೀಗೆ ವರ್ತಮಾನವನ್ನು ಹೇಳಿ ಕಳುಹಿಸಿದಳು "ಆಂಗ್ಲೇಯರು ಸಾರ್ವಭೌಮರು, ಅವರು ನಿಗ್ರಹಾನುಗ್ರಹ ಸಮರ್ಥರು. ಅವರಿಗೆ ಸಮಾನನೆಂದು ತಿಳಿದು, ಆ ಜೀತವನ್ನು ಕೊಡುವೆನೆಂದು ಹೇಳುತ್ತೀಯೋ! ಆದರೆ ನಿನ್ನಂಥಾವರು ಇನ್ನು ಹತ್ತು ಜನಗಳು ಬಂದರೂ, ಸ್ತ್ರೀಯಾದ ನಾನು ಅವರೆಲ್ಲರನ್ನೂ ಪೌರುಷ

ಹೀನರನ್ನಾಗಿ ಮಾಡುವೆನಲ್ಲದೆ ನಿನ್ನನ್ನು ಲೆಕ್ಕಿಸುವದಿಲ್ಲ' ಇಂಥಾ ವಾರ್ತೆಯು ನಥೇಭಾವಿಗೆ ತಿಳಿದೊಡನೆಯೇ ಹಿಡಿಯಲಾರದಷ್ಟು ರೋಷವು ಉತ್ಪತ್ತಿಯಾಗಿ ಅತಿವೇಗದಿಂದ ಅವನು ಝಾಸಿಯನ್ನು ಸಮೀಪಿಸಿದನು, ಲಕ್ಷ್ಮೀಬಾಯಿಯು ಹಾಗೆ ವರ್ತಮಾನವನ್ನು ಕಳುಹಿಸಿ ಸಂಗ್ರಾಮಕ್ಕೆ ಸಿದ್ಧಳಾಗಿದ್ದಳು. ಅಲ್ಲಿ ಆಕೆಯು ತಾನು ಪುರುಷವೇಷದಿಂದ ಸೇನಾಪತಿತ್ವವನ್ನು ವಹಿಸಿ ಘೋರ ಯುದ್ಧವನ್ನು ಮಾಡಿ, ನಥೇಭಾವನ್ನು ಹಿಡಿಸಿ, ಅವನ ಕಡೆಯಿಂದ ಲಕ್ಷಗಟ್ಟಲೆ ಧನಗಳನ್ನು ತೆಗೆದುಕೊಂಡು, ಅವನ ಸಂಗಡ ಸಂಧಿಯನ್ನು ಮಾಡಿದಳು.

೧೭ ಮಹಾರಾಣಿ ಲಕ್ಷ್ಮೀಬಾಯಿಯ ಪರಿಪಾಲನೆಯು ಅಲ್ಪಕಾಲವಾದರೂ, ಪ್ರಜೆಗಳಿಗೆ ತುಂಬಾ ಸುಖಕರವಾಗಿತ್ತಂತೆ! ಆದ್ದರಿಂದ ಅವರುಗಳೂ, ರಾಣಿಯವರಿಗೆ ಶುಭವನ್ನೇ ಕೋರುತ್ತಿದ್ದರು. ಲಕ್ಷ್ಮೀಬಾಯಿಗೆ ಪುರುಷವೇಷದಿಂದ ದರ್ಬಾರನ್ನು ಮಾಡುವದು, ಅಶ್ವಾರೋಹಣ ಮಾಡುವದು, ತುಂಬಾ ಪ್ರೀತಿಯು. ಆದ್ದರಿಂದ ಆಕೆಯು ಅನೇಕ ಸಮಯಗಳಲ್ಲಿ ಪುರುಷವೇಷದಿಂದ ಇರುತಿದ್ದಳು. ಸಾಧಾರಣವಾಗಿ ಆಕೆ ಸ್ತ್ರೀವೇಷದಲ್ಲಿದ್ದರೂ, ಅಲಂಕಾರಗಳನ್ನೂ ಧರಿಸಿಕೊಳ್ಳದೆ, ಶ್ವೇತವಸ್ತ್ರವನ್ನೇ ಉಟ್ಟುಕೊಳ್ಳುತ್ತಲಿದ್ದಳು.

೧೮. ರಾಣಿಗೆ ಬಡವರ ಮೇಲೆ ತುಂಬಾ ಪ್ರೀತಿಯಿತ್ತು. ಒಂದುದಿನ ಆಕೆ ಮಹಾಲಕ್ಷ್ಮಿ ದರ್ಶನಕ್ಕೆ ಹೋಗಿ ಬರುತ್ತಿದ್ದಾಗ ಕೆಲವರು ಬಡವರು ಗುಂಪುಕೂಡಿ ಆಕೆಯನ್ನು ಅಡ್ಡಗಟ್ಟಿದರು. ಅದರ ಕಾರಣವನ್ನು ಕೇಳಲಾಗಿ ಅವರು ತುಂಬಾ ಛಳಿಯಿಂದ ಬಾಧೆ ಪಡುತಿದ್ದದರಿಂದ ವಸ್ತ್ರದಾನ

ವನ್ನು ಅಪೇಕ್ಷಿಸಿ ಬಂದರೆಂದು ರಾಣಿಗೆ ತಿಳಿಯಿತು. ಅದರ ಮೇಲೆ ಆಕೆಯು ಅವರೆಲ್ಲರಿಗೂ, ಟೋಪಿ, ಅಂಗಿ, ಗೊಂಗಡಿ ಮೊದಲಾದವುಗಳನ್ನೆಲ್ಲಾ ಕೊಡಿಸಿದಳು.

೧೯. ಮಧ್ಯಹಿಂದೂಸ್ಥಾನವೆಲ್ಲವೂ ಹೆಚ್ಚು ಕಡಿಮೆ ಯಾಗಿ ಬಂಡಿಪೋಟು ಸೈನ್ಯದವರ ಸ್ವಾಧೀನವಾದ್ದರಿಂದ, ಆಗಿನ ಹಿಂದೂಸ್ಥಾನದ ಗವರ್ನರ್ ಜನರಲ್ ಲಾರ್ಡ್ ಕ್ಯಾನಿಂಗ್ ದೊರೆಯವರು ಇಂಗ್ಲೆಂಡ್ ದೊರೆತನದವರ ಅನುಮತಿ ಪಡೆದು ಇಂಗ್ಲೆಂಡಿನಲ್ಲಿಯೂ, ಹಿಂದೂಸ್ಥಾನ ದಲ್ಲಿಯೂ, ಪ್ರವೀಣರಾದ ಸೇನಾನಾಯಕರನ್ನು ಕರಿಸಿ, ರಾಜ ಭಕ್ತಿಯುಳ್ಳ ಇತರ ಸೈನ್ಯಗಳನ್ನು, ಸಹಾಯಾರ್ಥವಾಗಿ ಕರಿಸಿಕೊಂಡು, ಇತರ ಭೂಪತಿಗಳ ಸೈನ್ಯಗಳನ್ನೂ, ಅವರ ವಶಮಾಡಿ ಆ ಪ್ರಚಂಡ ಸೈನ್ಯವನ್ನು ನಡೆಸುವದಕ್ಕೆ ಯುದ್ಧ ಕಲಾವಿಶಾರದನಾದ ಸರ್ ಹ್ಯೂರೋಜ್ ದೊರೆಯವರನ್ನು ನಿಯಮಿಸಿ, ಆತನಿಗೆ ಸರ್ವಸೇನಾಧಿಪತ್ಯವನ್ನು ಕೊಟ್ಟರು

೨೦. ೧೮೫೭ ನೇ ಸಂವತ್ಸರದ ಡಿಸೆಂಬರು ೧೭ ನೇ ತಾರೀಖು ಸರ್ ಹ್ಯೂರೋಜ್ ದೊರೆಯವರು ಸೇನಾನಾಯ ಕತ್ವವನ್ನು ಸ್ವೀಕರಿಸಿದರು. ಯುದ್ಧಕ್ಕೆ ಹೋಗುವ ಮಾರ್ಗ ವನ್ನು ವಿಚಾರಿಸಿ, ಬೇರೆಬೇರೆ ಮಾರ್ಗಗಳಲ್ಲಿ ಸೇನೆಗಳು ನಡೆ ಯುವ ಕ್ರಮಗಳನ್ನು ತಿಳಿಸಿದರು. ಕ್ರಮಕ್ರಮವಾಗಿ ಸರ್ ಹ್ಯೂರೋಜ್ ದೊರೆಯವರು ತಮ್ಮ ಸಂಗ್ರಾಮ ಕಾಶಲದಿಂದ ಎಲ್ಲರೂ ಕೊಂಡಾಡುವಂತೆ ಬಂಡಿಪೋಟು ಸೈನ್ಯಗಳ ವಾಲಾದ ಭೂಮಿಗಳು ಅನೇಕಗಳನ್ನು ಗೆದ್ದು, ಝಾನ್ಸಿಯನ್ನು ಗೆಲ್ಲ ಬೇಕೆಂಬ ನಿಶ್ಚಯದಿಂದ ಅಲ್ಲಿಗೆ ಹದಿನಾಲ್ಕು ಮೈಲಿಗಳ ಸಮೀ ಪದಲ್ಲಿ ತಮ್ಮ ಸೈನ್ಯವನ್ನು ಇಳಿಸಿದರು. ಅವರು ಅಲ್ಲಿಂದ

ಝಾನ್ಸೀಯ ವರ್ತಮಾನಗಳನ್ನು ತಿಳಿಯುತ್ತ (ಏಪ್ರಿಲ ನೇ ಮಾರ್ಚ ೨೦ ನೇ ತಾರೀಖಿನಲ್ಲಿ ಝಾನ್ಸೀ ಸರಹದ್ದನ್ನು ಪ್ರವೇಶಿಸಿ, ಪುರ ರಚನೆಯನ್ನು ತಿಳಿದು ತದನುಸಾರವಾಗಿ ಸೈನ್ಯಗಳನ್ನು ಯುದ್ಧಕ್ಕೆ ಹೊರಡಲು ಅಪ್ಪಣೆ ಮಾಡಿದರು.

೨೧. ಆಗ ಶೌರ್ಯರಾಶಿಯಾದ ರಾಣಿಯು ಆಗ್ರಹಿಸಿ ಇನ್ನು ಇಂಗ್ಲಿಷಿನವರ ಸಂಗಡ ಸಂಧಿಯಾಗಲಾರದೆಂದು ತಿಳಿದುಕೊಂಡು ಯುದ್ಧ ಸನ್ನಾಹವನ್ನು ಮಾಡಲಾರಂಭಿಸಿದಳು. ಸಧೇಭಾವಿನ ಸಂಗಡ ರಣವನ್ನು ನಡಿಸಿದಾಗ ಇಟ್ಟದ್ದ ವಿಶೇಷ ಸೈನ್ಯಕ್ಕೆ ಅನೇಕಸ್ಥಳಗಳಿಂದ ಸಹಾಯಾರ್ಥವಾಗಿ ಬಂದ ಬಂದಿಪೋಟು ಸೈನ್ಯಗಳು ಜೊತೆಯಾದವು. ರಾಣಿಯು ಸೈನಿಕರಲ್ಲಿ ಶೂರರಾದ ಠಾಕರುಜನಗಳೂ, ವಿಶ್ವಾಸಾರ್ಹರಾದ ಪಠಾಣರು ವಿಶೇಷವಾಗಿದ್ದರು ಆ ಸೇನಾಧಿಪತ್ಯವೆಲ್ಲವನ್ನೂ ರಾಣಿಯು ತಾನೇ ಸ್ವೀಕರಿಸಿ ತಕ್ಕ ಬಂದೋಬಸ್ತನ್ನು ಮಾಡಲಾರಂಭಿಸಿದಳು. ಝಾನ್ಸೀ ಕೋಟೆಯು ತುಂಬಾ ವಿಶಾಲವುಳ್ಳದ್ದಾಗಿಯೂ, ಅಭೇದ್ಯವಾಗಿಯೂ, ಇತ್ತು. ಅಲ್ಲಿ ದೊಡ್ಡ ದೊಡ್ಡ ಬುರುಜುಗಳಿದ್ದವು. ಆ ಕಿಲ್ಲೆಯಲ್ಲಿ ವಿಶೇಷ ದಿನಗಳಿಂದಲೂ, ನಿರುಪಯೋಗಗಳಾಗಿದ್ದ ಅನೇಕ ಫಿರಂಗಿಗಳನ್ನು, ರಾಣಿಯು ಸರಿಪಡಿಸಿ ಬುರುಜುಗಳ ಮೇಲೆ ಏರಿಸಿದಳು. ಒಂದೊಂದು ಫಿರಂಗಿಗೆ ಒಬ್ಬೊಬ್ಬ ಯುದ್ಧಕಲಾ ನಿಪುಣನನ್ನು ನಿಯಮಿಸಿದಳು. ಹೀಗೆ ಆಗ ತನ್ನ ನಿಪುಣತೆಯಿಂದ ಸೇನೆಗಳನ್ನು ನಡೆಯಿಸುತ್ತಾ ಯುದ್ಧ ಸನ್ನದ್ಧಳಾದಳು.

೨೨. ಈ ಪ್ರಕಾರ ಉಭಯ ಸೈನ್ಯಗಳೂ ಯುದ್ಧ ಸನ್ನದ್ಧಗಳಾಗಿ ೨೩ ನೇ ತಾರೀಖು ಸಂಗ್ರಾಮಕ್ಕೆ ಆರಂಭಿಸಿದವು. ಆದಿನ ಶತ್ರುಗಳು ಝಾನ್ಸೀ ಖಿಲ್ಲೆಯನ್ನು ಸಮೀಪ

ಸಲು ಯತ್ನಿಸಿದರು. ಆದರೆ ಕೋಟೆಯಲ್ಲಿನವರ ಆಗ್ನೇಯಾಸ್ತ್ರ ಪ್ರವೃಷ್ಟಿಯು ಅವರಿಗೆ ಅಸಾಧ್ಯವಾದ್ದರಿಂದ ಸಮೀಪಿಸದೆ ಹೋದರು. ಆರಾತ್ರಿ ಇಂಗ್ಲಿಷು ಸೈನ್ಯದವರಲ್ಲಿ ಕೆಲವರು ಗ್ರಾಮವನ್ನು ಸಮೀಪಿಸಿ ಅಲ್ಲಿ ನಾಲ್ಕು ಸ್ಥಳಗಳಲ್ಲಿ ಬುರುಜುಗಳನ್ನು ಏರ್ಪಡಿಸಿ ಅದರ ಮೇಲೆ ಫಿರಂಗಿಗಳನ್ನಿಟ್ಟರು ಝಾನ್ಸೀಯಲ್ಲಿನವರೂ,ಆ ರಾತ್ರಿ ಯೆಲ್ಲವೂ ಯುದ್ಧ ಪ್ರಯತ್ನವನ್ನೇ ಮಾಡುತ್ತಿದ್ದರು. ೨೪ ನೆಯ ತಾರೀಖುದಿನ ಸಹಿತ ಇಂಗ್ಲಿಷು ಸೈನ್ಯಗಳೇ ದೈನ್ಯವನ್ನು ಹೊಂದಿತು. ೨೫ ನೇ ತಾರೀಖು ಪ್ರಾತಃಕಾಲದಲ್ಲಿಯೇ ಇಂಗ್ಲಿಷು ಸೈನ್ಯದಿಂದ ಕಿಲ್ಲೆಯ ಮೇಲೆಯೂ, ಪುರದ ಮೇಲೆಯೂ, ಶತ ಮುಖ ಬಾಣ ವೃಷ್ಟಿಯು ಸುರಿಯಲಾರಂಭಿಸಿತು. ಆ ಗೋಳವು ಬಂದು ಬಂದು ಶತ್ರು ಸೈನ್ಯದಲ್ಲಿ ಬಿದ್ದು ಒಡೆದು ನಾಲ್ಕು ಐದು ಜನಗಳನ್ನು ಕೊಂದು ಹತ್ತು ಮಂದಿಯನ್ನು ಗಾಯಪಡಿಸುತ್ತಿತ್ತು ಆದ್ದರಿಂದ ಆದಿನ ಆ ಪಟ್ಟಣದಲ್ಲಿ ಎಲ್ಲಿ ನೋಡಿದರೂ ಹಾಹಾ ಕಾರಗಳೇ ಕೇಳಿ ಬರುತಿದ್ದವು. ಪ್ರಜೆಗಳು ಅನ್ನಾಹಾರಕ್ಕಾಗಿಯೂ ತಿರುಗಾಡದೆ ಇದ್ದರು. ಅವರ ದೈನ್ಯವನ್ನು ಕಂಡು ರಾಣಿಯು ಅವರಿಗೋಸ್ಕರ ಒಂದು ಅನ್ನ ಸತ್ರವನ್ನು ಏರ್ಪಡಿಸಿದಳು. ಆಂಗ್ಲೇಯ ಸೈನ್ಯಗಳಿಂದ ನಾರಾಯಣಾಸ್ತ್ರ ತುಲ್ಯಗಳಾದ ಶಸ್ತ್ರಗಳಿಂದ ತನ್ನ ಸೈನ್ಯಗಳು ದಿನ ಮುಖವಾಗುವದನ್ನು ಕಂಡು ಲಕ್ಷ್ಮೀಬಾಯಿಯು ಅಷ್ಟಕ್ಕೆ ಧೈರ್ಯವನ್ನು ಬಿಡದೆ ಸೈನಿಕರಿಗೆ ಉತ್ಸಾಹ ಉಂಟಾಗುವ ಹಾಗೆ ಮಾಡಿ ಆಂಗ್ಲೇಯ ಸೈನ್ಯವನ್ನು ಧಿಕ್ಕರಿಸಿದಳು. ಹೀಗೆ ಉಭಯ ಸೈನ್ಯಗಳೂ ಎಡಬಿಡದೆ ಮಾರ್ಚಿ ಮೂವತ್ತನೇ ತಾರೀಖಿನವರೆಗೂ ಸಂಗ್ರಾಮವನ್ನು ನಡಿಸುತ್ತಿದ್ದವು.

ಪ್ರತಿಪಕ್ಷದವರಾದ ಆಂಗ್ಲೇಯರ ಸೈನ್ಯದಲ್ಲಿ ಅನೇಕ ಸೇನಾನಾಯ
ಕರಿದ್ದು ನಡಿಸುವದರಿಂದಲೂ, ಸೈನಿಕರು ಅದುವರೆಗೆ
ಯುದ್ಧಕ್ಕೆ ಅನುಕೂಲವಾದ ಶಿಕ್ಷೆಯನ್ನು ತಿಳಿದು ಇದ್ದುದ
ರಿಂದಲೂ, ಅವರ ಸೈನ್ಯಗಳು ಚದರದೆ ಯುದ್ಧವನ್ನು ಮಾಡಿ
ಜಯಿಸುವುದು ಒಂದು ಆಶ್ಚರ್ಯವಲ್ಲ ಇನ್ನು ರಾಣಿಯ
ಸೈನ್ಯವಾದರೋ ಯುದ್ಧ ಶಿಕ್ಷೆಯನ್ನು ತಿಳಿಯದಂಥ ಒಂದಿ
ಪೋಟರು. ಅವರ ಸಂಗಡ ಸೇರಿದ ಜನ ಸಂಖ್ಯೆಯು ವಿಶೇಷ
ವಾಗಿ ಕಾಣಿಸಿದರೂ, ಅವರೆಲ್ಲರೂ ಒಂದೇ ಪ್ರಕಾರವಾಗಿ
ಯುದ್ಧವನ್ನು ಮಾಡಲಾರದೆ ಇದ್ದುದರಿಂದ ವಿಶೇಷವಾಗಿ ಬೆದ
ರುತ್ತಿದ್ದರು. ಇಂಥ ವಿಶೇಷ ಸೈನ್ಯಕ್ಕೆಲ್ಲಕ್ಕೂ ರಾಣಿಯೇ
ಸೇನಾನಾಯಕತ್ವವನ್ನು ವಹಿಸಿ ನಡಿಸುವುದು ಬಹು ದುರ್ಘಟ
ವೆಂದು ಎಲ್ಲರಿಗೂ ತಿಳಿದದ್ದೇ. ಅದರೂ ಆ ವೀರ ವನಿತೆಯು
ತನ್ನ ಬುದ್ಧಿ ಚಾತುರ್ಯದಿಂದಲೂ, ಶೌರ್ಯ ಸಂಪದದಿಂದಲೂ
ಪ್ರಖ್ಯಾತರಾದ ಆಂಗ್ಲೇಯ ಸೇನಾನಾಯಕರೊಂದಿಗೆ ಪ್ರತಿ
ಭಟಿಸಿ, ಯುದ್ಧ ಭೂಮಿಯಲ್ಲಿ ನಿಂತು ಅನೇಕ ದಿನಗಳು
ಸಂಗ್ರಾಮವನ್ನು ನಡಿಸಿ, ಅವರಿಂದ "ಈಕೆಯನ್ನು ಗೆಲ್ಲು
ವದು ದುರ್ಘಟವೆನ್ನಿಸಿಕೊಳ್ಳುವದು ಬಹಳ ಆಶ್ಚರ್ಯ
ವಲ್ಲವೇ"

೨೩. ಆ ಯುದ್ಧ ಸಮಯದಲ್ಲಿ ರಾಣಿಯು ಸೈನ್ಯ
ದಲ್ಲೆಲ್ಲಾ ತನ್ನ ದೃಷ್ಟಿಯನ್ನು ಹರಡಿಸುತ್ತ ಅಲ್ಲಿರುವ ಆ
ನಾಯಕರನ್ನು ತೊಲಗಿಸುತ್ತಾ ಸೈನಿಕರಿಗೆ ಅನೇಕ ಬಹು
ಮಾನಗಳನ್ನು ಕೊಡುತ್ತ ಯುದ್ಧ ಧರ್ಮಗಳನ್ನು ತಿಳಿಸುತ್ತ,
ಅವರನ್ನು ಯುದ್ಧಕ್ಕೆ ಉತ್ಸಾಹ ಪಡಿಸಿ, ಅವರ ಮನಸ್ಸಿನಲ್ಲಿ
ವೀರರಸವು ಉದ್ಭವಿಸುವ ಹಾಗೆ ಮಾಡುತ್ತಿದ್ದಳು. ಆಗ

ಆಕೆಯು ತುಂಬಾ ಘಾಯ ಪಟ್ಟು ಬಾದವರಿಗೆ ತನ್ನ ಸಮಕ್ಷ ದಲ್ಲಿಯೇ ಚಿಕಿತ್ಸೆಯನ್ನು ನಡಿಸುತ್ತಲಿದ್ದಳು. ಆಗ ಆಕೆ ತುಂಬಾ ಘಾಯಪಟ್ಟವರ ಕಡೆಯಿಂದ ತನ್ನ ಹಸ್ತವನ್ನು ತಿರುಗಿಸಲಾಗಿ ಆ ಸೈನಿಕರು ಅಧಿಕಾವೇಶಪರವಶರಾಗಿ ಯುದ್ಧವನ್ನು ಮಾಡಲು ಉತ್ಸಾಹ ಉಳ್ಳವರಾಗುತ್ತಿದ್ದರು. ಇಂಥ ಸ್ತ್ರೀರತ್ನಗಳು ಜನ್ಮಿಸುವುದರಿಂದಲ್ಲವೇ ಪುರುಷರಿಗೆ ಸಮಾನವಾದ ಧೈರ್ಯಚಾತುರ್ಯಗಳು ಉಂಟೆಂದು ಎಲ್ಲ ರಿಗೂ ತಿಳಿಯಲಾಯಿತು.

೨೪ ಹೀಗೆ ೩೧ ನೇ ತಾರೀಖಿನವರೆಗೂ, ಯುದ್ಧ ನಡೆದರೂ ಆಂಗ್ಲೇಯಬಲಗಳು ರಾಣಿಯ ಕೋಟೆಯನ್ನು ಭೇದಿಸಲು ಆಗಲಿಲ್ಲ. ಈ ರಣರಂಗದಲ್ಲಿ ಅವರ ಯುದ್ಧ ಸಾಮಗ್ರಿಯು ಅಸ್ತ್ರಶಸ್ತ್ರಕ್ಕೆ ಕಡಿಮೆಯಾದ್ದರಿಂದ ಅವರು ಜಯದಲ್ಲಿ ಅಷ್ಟು ನಂಬಿಕೆ ಇಲ್ಲದವರಾಗಿದ್ದರು. ಇಷ್ಟ ರಲ್ಲಿ ನಾನಾಸಾಹೇಬು ಪೇಷ್ವೆಯ ಸೇನಾನಾಯಕನಾದ ತಾತ್ಯಾ ಟೋಪೆ ಎಂಬ ವೀರನು ವಿಶೇಷ ಸೈನ್ಯದ ಸಹಿತ ರಾಣಿಗೆ ಸಹಾಯ ಮಾಡುವದಕ್ಕಾಗಿ ಅತುರದಿಂದ ಬರುತಿದ್ದನು. ಆ ಸೈನ್ಯವು ಬಹಳ ದೂರದಲ್ಲಿರುವಾಗಲೇ ಆಂಗ್ಲೇಯ ಸೇನಾ ನಾಯಕರು ದೂರದರ್ಶಕ ಯಂತ್ರದಿಂದ ಕಂಡರು. ಆಗ ಅಗ್ನಿ ದೇವನಿಗೆ ವಾಯುದೇವನು ಸಹಾಯವಾದ ಹಾಗೆ ಈ ರಾಣಿಗೆ ಆ ಸೈನ್ಯವು ಬಂದು ಜೊತೆಯಾದರೆ ನಮ್ಮ ಜಯವು ಅಸಾಧ್ಯವೆಂದು ಕೊಂಡರು. ಸರ್ ಹ್ಯೂರೋಜ್ ದೊರೆಯು ಎಷ್ಟು ಮಾತ್ರವೂ ಭಯಪಡದೆ ಇಲ್ಲಿ ರಾಣಿಯವರ ಸಂಗಡ ಹೋರಲು ಸ್ವಲ್ಪ ಸೈನ್ಯವನ್ನು ನಿಯಮಿಸಿ ಕೋಟೆಯವರಿಗೆ ತಿಳಿಯದ ಹಾಗೆ ಸ್ವಲ್ಪ ಸೈನ್ಯವನ್ನು ಕಾಲ್ಪೀಮಾರ್ಗದಲ್ಲಿ ಕಳು ಹಿಸಿದನು. ಅವನು ಹೊರಟು ಆಯಾ ದಾರಿಗಳಲ್ಲಿ ಬರು ತ್ತಿದ್ದ ಶತ್ರು ಸೈನ್ಯಗಳ ಸಂಗಡ ಹೋರಾಡಿ ತಮ್ಮ ಯುದ್ಧ

ಸಾಮರ್ಥ್ಯದಿಂದ ಅವನನ್ನು ಹೊರಡಿಸಿದರು. ತಾತ್ಯಾ ಟೋಪಿಯ ಸೈನ್ಯಗಳು ತಿರುಗಿ ಬೀಳಲಾರದೆ ತಮ್ಮ ಯುದ್ಧ ಸಾಹಿತ್ಯವನ್ನು ಅಲ್ಲಿಯೇ ಬಿಟ್ಟು, ಪಲಾಯಿತವಾದುವು. ಆದ್ದರಿಂದ ಆ ಸಾಹಿತ್ಯವು ಅನಾಯಾಸವಾಗಿ ದೊರತಿದರಿಂದ ಸರ್ ಹ್ಯೂರೋಜ್‌ರವರ ಬಲಗಳಿಗೆ ತುಂಬಾ ಉತ್ಸಾಹ ಉಳ್ಳದ್ದಾದವು. ಅವರಿಗೆ ಇದುವರೆಗೆ ಇದ್ದ ಆಧೈರ್ಯವೆಲ್ಲವೂ ಹೋಗಿ ಶತ್ರುಗಳ ಮೇಲೆ ಅಧಿಕೋತ್ಸಾಹದಿಂದ ತಪ್ತವಾದ ವರ್ಷವನ್ನು ಸುರಿಸಲಾರಂಭಿಸಿದರು

೨೫. ಏಪ್ರೈಲ್ ೨ ನೇ ತಾರೀಖಿನ ವರೆಗೂ ಯುದ್ಧವನ್ನು ಮಾಡಿದರೂ, ತಾವು ಪುರಪ್ರವೇಶವನ್ನು ಮಾಡದೆ ಹೋದ ದಕ್ಕೆ ತುಂಬಾ ಚಿಂತಿಸಿ ಸರ್ ಹ್ಯೂರೋಜ್‌ದೊರೆಯುವರು ತಮ್ಮ ಬುದ್ಧಿಪ್ರವೀಣತೆಯಿಂದ ಆ ದಿನದಲ್ಲಿಯೇ ಆ ಕಿಲ್ಲೆಯನ್ನು ಕೈ ಹಿಡಿಯಲು ಯೋಚಿಸಿದರು. ಆತನು ತದನುಸಾರವಾಗಿ ಬಲಗಳನ್ನು ಕಳುಹಿಸಲು ಅವರು ತುಂಬಾ ಉತ್ಸಾಹದಿಂದ ಶತ್ರುಪಕ್ಷದಿಂದ ಬರುವ ಬಾಣಗಳನ್ನು ಸಹಿಸಿಕೊಂಡು ಗ್ರಾಮದ್ವಾರದಿಂದಲೂ, ಕೋಟೆಯ ಗೋಡೆಯಿಂದಲೂ, ಪುರವನ್ನು ಪ್ರವೇಶಿಸಲಾರಂಭಿಸಿದರು. ತಾತ್ಯಾಟೋಪಿಯ ಪರಾಭವವನ್ನು ಕೇಳಿ ರಾಣಿಯ ಸೈನಿಕರು ತುಂಬಾ ನಿರುತ್ಸಾಹರಾದರು. ಆದರೂ ಯುದ್ಧದಲ್ಲಿ ಕಳದು ಉಳಿದವರಿಗೆ ರಾಣಿಯು ತನ್ನ ವಾಕ್ಯದಿಂದ ಶೌರ್ಯವನ್ನು ಹುಟ್ಟಿಸಿ ಸಂಗ್ರಾಮವನ್ನು ನಡಿಸುತ್ತಲಿದ್ದಳು. ೩ ನೇ ತಾರೀಖಿನ ದಿನ ತಮ್ಮನ್ನು ಎದುರಿಸುವವರಿಲ್ಲದೆ ಹೂಣಬಲಗಳು ಪುರವೆಲ್ಲವನ್ನೂ ವ್ಯಾಪಿಸಿದವು. ೪ ನೇ ತಾರೀಖು ಪಟ್ಟಣವೆಲ್ಲವೂ ಅವರ ಸ್ವಾಧೀನವೇ ಆಯಿತು.

೨೬. ತಾನು ಇಷ್ಟು ದಿನಗಳು ಮಾಡಿದ ಶ್ರಮೆಯು ವ್ಯರ್ಥವಾಗಿ ಹೋಗಿ ಶತ್ರುಗಳು ತನ್ನ ನಗರವನ್ನು ಆಕ್ರಮಿಸುವದನ್ನು ಕಂಡು ರಾಣಿಯು ತುಂಬ ವಿಚಾರಪಟ್ಟಳು. ಆದರೆ ಆಕೆಯು ಅಷ್ಟಾದರೂ ಧೈರ್ಯವನ್ನು ಬಿಡದೆ ಕರ್ತವ್ಯವನ್ನು ಆಲೋಚಿಸಿ ಜಯೋತ್ಸಾಹಿಗಳಾದ ಶತ್ರುಗಳು ಇನ್ನು ತನ್ನ ಕಿಲ್ಲೆಯನ್ನು ಆಕ್ರಮಿಸಿ ತನ್ನನ್ನು ಬಂಧಿಸುವರೆಂದು ತಿಳಿದು ಆಕೆಯು ಹೇಗಾದರೂ ರಣರಂಗದಲ್ಲಿ ಪ್ರಾಣವನ್ನು ಬಿಡಬೇಕೆಂದು ನಿಶ್ಚಯಿಸಿದಳು.

ಆಗ ಆಕೆ ಪುರುಷವೇಷದಿಂದ ಹೊರಗೆ ಹೊರಡಲು ನಿಶ್ಚಯಿಸಿ ತನ್ನ ದತ್ತು ಪುತ್ರನಲ್ಲಿ ಅಧಿಕ ಪ್ರೀತಿಯುಳ್ಳವಳಾದ್ದರಿಂದ ಆ ಹುಡುಗನು ತನ್ನ ಬೆನ್ನಿಗೆ ಕಟ್ಟಿಕೊಂಡು ಅಶ್ವಾರೋಹಣವನ್ನು ಮಾಡಿ ನಾಲ್ಕನೇ ತಾರೀಖಿನ ರಾತ್ರಿ ಸ್ವಲ್ಪ ಸೈನ್ಯಸಹಿತಳಾಗಿ ಆಂಗ್ಲೇಯ ಸೈನ್ಯಗಳ ಸಂಗಡ ಹೋರುತ್ತ ಅದನ್ನು ಉಪಾಯದಿಂದ ದಾಟಿಕೊಂಡು ಕಾಲ್ಪೀಮಾರ್ಗವಾಗಿ ಹೋದಳು

೨೭. ರಾಣಿಯು ತನ್ನ ಸೈನ್ಯದಿಂದ ಕಾಲ್ಪೀಮಾರ್ಗವಾಗಿ ಹೋದ ಸಂಗತಿಯನ್ನು ಕೇಳಿ ಸರ್ ಹ್ಯೂರೋಜ್ ದೊರೆಯವರು ಸಖೇದಾಶ್ಚರ್ಯಮಗ್ನರಾದರು. ಆತನು ಅಷ್ಟಕ್ಕೆ ಸುಮ್ಮನಿರದೆ ಒಬ್ಬ ಸೇನಾನಾಯಕನನ್ನು ಸ್ವಲ್ಪ ಸೇನಾಸಹಿತವಾಗಿ ಆಕೆಯನ್ನು ಬೆನ್ನಟ್ಟಲು ಕಳುಹಿಸಿದನು. ಆದರೆ ರಾಣಿಯು ಅವರಿಗೆ ದೃಗ್ಗೋಚರಳಾಗದೆ ತನ್ನ ಕುದುರೆಯನ್ನು ಅತಿ ತ್ವರೆಯಾಗಿ ನಡಿಸುತ್ತಲಿದ್ದಳು. ಜನ್ಮನಾದಿಯಾಗಿ ಯುದ್ಧವೆಂಬ ಮಾತನ್ನು ತಿಳಿಯದೆ ಯಾವಾಗಲೂ ರಾಣಿವಾಸದಲ್ಲಿ ವಾಸವಾಗಿದ್ದ ಬ್ರಾಹ್ಮಣ ವಿತಂತುವು

ವೀರರಿಗೆ ಅಭೇದ್ಯವಾದ ಹೂಣ ಸೈನ್ಯವನ್ನು ಭೇದಿಸಿ ಕೊಂಡು ಕ್ಷಣದಲ್ಲಿ ಅದೃಶ್ಯವಾದುದಕ್ಕೆ ಯಾರುತಾನೇ ಆಶ್ಚರ್ಯಪಡದೆ ಇರುವರು ?

೨೮. ಮಹಾರಾಣಿ ಲಕ್ಷ್ಮೀಬಾಯಿಯು ಆ ರಾತ್ರಿ ಹೊರಟು ತನ್ನನ್ನು ಹಿಡಿಯಬಂದವರಿಗೆ ದೃಗ್ಗೋಚರಳಾಗದ ಸೂರ್ಯೋದಯಕ್ಕೆ ಝಾಂಸೀ ಸಂಸ್ಥಾನದ ಸರಹದ್ದಾದ ಭಾಂಡೇರಾ ಎಂಬ ಗ್ರಾಮವನ್ನು ಪ್ರವೇಶಿಸಿದಳು. ಅಲ್ಲಿ ಆಕೆಯು ಕುದುರೆಯನ್ನು ಇಳಿದು ಕುಮಾರನಿಗೆ ಫಲಾಹಾರವನ್ನು ಮಾಡಿಸಿ ಪುನಃ ಅಶ್ವಾರೋಹಣ ಮಾಡಿದಳು. ಇಷ್ಟರಲ್ಲಿ ಆಂಗ್ಲೇಯ ಸೇನಾಧಿಪತಿಯು ಸ್ವಲ್ಪ ಸೈನ್ಯಸಹಿತನಾಗಿ ತನ್ನನ್ನು ಹಿಡಿಯಬಂದನೆಂದು ಆಕೆಗೆ ತಿಳಿಯಿತು ಆ ಸಮಯದಲ್ಲಿ ಆಕೆಯ ಹತ್ತಿರ ಹದಿನೈದು ಜನ ಶೂರರು ವಿನಾ ಬೇರೆ ಸೈನ್ಯವಿರಲಿಲ್ಲ. ಹೀಗಿದ್ದರೂ ಆ ಶೂರವನಿತೆಯು ಭಯಪಡದೆ ತನ್ನ ಖಡ್ಗವನ್ನು ಒರೆಯಿಂದ ತೆಗೆದು ಯುದ್ಧಸನ್ನದಳಾಗಿ ನಡೆಯುತ್ತಿದ್ದಳು. ಇಷ್ಟರಲ್ಲಿ ಆ ಸೈನಿಕರು ಆಕೆಯನ್ನು ಸಮೀಪಿಸಿದರು. ಆದರೆ ಆಕೆ ತನ್ನ ಯುದ್ಧನೈಪುಣ್ಯದಿಂದ ಆ ಸೈನಿಕರನ್ನು ಗಾಯಪಡಿಸಿ ಕೆಲವರನ್ನು ಯಮಸದನಕ್ಕೆ ಕಳುಹಿಸಿ ಕ್ಷಣದಲ್ಲಿಯೇ ಅದೃಶ್ಯಳಾದಳು. ಬಹುಸೈನ್ಯ ಸಮೇತವಾಗಿದ್ದ ಆಂಗ್ಲೇಯ ಸೇನಾಧ್ಯಕ್ಷನನ್ನು ಸ್ವಲ್ಪ ಸೈನ್ಯಸಹಿತಳಾದ ಒಬ್ಬ ಅಬಲೆಯು ಓಡಿಸಿ ಕಳುಹಿಸುವದು ಎಷ್ಟೋ ಆಶ್ಚರ್ಯವಲ್ಲವೇ ? ಅಲ್ಲಿಂದ ಹೊರಟು ಆ ರಾತ್ರಿ ಆಕೆಯು ಕಾಲ್ಪೀನಗರದಲ್ಲಿ ನಾನಾ ಸಾಹೇಬನ ಹತ್ತಿರ ಸೇರಿದಳು. ಹೀಗೆ ನಿದ್ರಾಹಾರಗಳಿಲ್ಲದೆ ಆಕೆಯು ಅಶ್ವಾರೋಹಣವನ್ನು ಮಾಡಿ ೧೦೮ ಮೈಲಿಗಳ ಪ್ರಯಾಣಮಾಡಿದಳು

ಇದನ್ನು ನೋಡಲಾಗಿ ಆಕೆಯ ಧೈರ್ಯವೂ, ಚಾತುರ್ಯವೋ ಹಣ ಶಕ್ತಿಯೂ ಎಲ್ಲರಿಗೂ ಅತ್ಯಾಶ್ಚರ್ಯಕರವೆಂದು ತೋರದೆ ಇರದು.

೨೯. ರಾಣಿ ಲಕ್ಷ್ಮೀಬಾಯಿಯು ಕಾಲ್ಪಿಗೆ ಬಂದ ಸಂಗತಿಯನ್ನು ಕೇಳಿ ಬಂದೇ ವಾಲಾ ನವಾಬನು ತನ್ನ ಸೈನ್ಯಸಹಿತವಾಗಿ ರಾವುಸಾಹೇಬ ಪೇಷ್ವೆಗೆ ಸಹಾಯನಾದನು. ಇವರೆಲ್ಲರೂ ತಮ್ಮ ಸೈನ್ಯಗಳನ್ನು ಯುದ್ಧಸನ್ನದ್ಧರನ್ನಾಗಿ ಮಾಡುತ್ತಿದ್ದರು. ರಾಣಿಯ ಶೌರ್ಯವನ್ನು ತಿಳಿದೂ, ರಾವುಸಾಹೇಬ ಪೇಷ್ವೆಯು ತನಗಿರುವ ಅಭಿಮಾನದಿಂದ ತನ್ನ ಸರ್ವಸೇನಾಧಿಪತ್ಯವನ್ನೂ ಒಬ್ಬ ಸ್ತ್ರೀಗೆ ಕೊಡುವುದಕ್ಕೆ ಸಮಾಧಾನ ಪಡದೆ ಹೋದನು. ಅದರಿಂದ ರಾಣಿಯು ಸ್ವಲ್ಪಮಟ್ಟಿಗೆ ಯುದ್ಧದಲ್ಲಿ ನಿರುತ್ಸಾಹಳಾದಳು.

೩೦. ಸರ್ ಹ್ಯೂರೋಜ್ ದೊರೆಯವರು ಝಾನ್ಸಿಯಿಂದ ಹೊರಟು ಕಾಲ್ಪೀಯನ್ನು ಗೆಲ್ಲುವದಕ್ಕಾಗಿ ಸೈನ್ಯಸಮೇತವಾಗಿ ರಾತ್ರೀ ಹಗಲೂ ಪ್ರಯಾಣವನ್ನು ಮಾಡುತ್ತ ಕಾಲ್ಪೀಸಮೀಪದಲ್ಲಿನ ಕೂಪೆಯುಂಬ ಗ್ರಾಮದಲ್ಲಿ ಪೇಷ್ವೆಯ ಸೈನ್ಯಗಳನ್ನು ಎದುರಿಸಿ ಕ್ಷಣದಲ್ಲಿ ಓಡಿಸಿದರು. ಆದ್ದರಿಂದ ಪೇಷ್ವೆ ಬಾಂದ್‌ಸಂಸ್ಥಾನದ ನವಾಬ್‌ಮೊದಲಾದವರ ಸಂಗಡ ರಾಣಿಯು ಕಾಲ್ಪಿಗೆ ಓಡಬೇಕಾಗಿ ಬಂದಿತು. ಆ ಸಮಯದಲ್ಲಿ ಆಕೆಯು ಸ್ವಂತ ಸೈನ್ಯವಿಲ್ಲದ್ದರಿಂದಲೂ ಪೇಷ್ವೆಯು ಆಕೆಯನ್ನು ಮುನ್ನಿಟ್ಟದ್ದರಿಂದಲೂ, ಈ ಯುದ್ಧದಲ್ಲಿ ಆಕೆಯ ಪ್ರತಾಪವು ಏನೂ ತಿಳಿಯಬರಲಿಲ್ಲ. ಆಕೆಯು ಕಾಲ್ಪಿಗೆ ಹೋದಮೇಲೆ ಸೈನ್ಯದ ಬಂದೋಬಸ್ತನ್ನು ಕುರಿತು ತನ್ನ ಅಭಿಪ್ರಾಯವನ್ನು ಪೇಷ್ವೆಗೆ ತಿಳಿಸಿದಳು. ಆಗ ಆತನು ಲಕ್ಷ್ಮೀ

ಬಾಯಿಯು ತಿಳಿವನ್ನು ಕಂಡು ತಾತ್ಯಾಟೋಪಿಯನ್ನೂ, ಲ
ಕ್ಷ್ಮೀಬಾಯಿಯನ್ನೂ, ಸರ್ವಸೈನ್ಯಾಧಿಪತ್ಯಕ್ಕೆ ನಿಯಮಿಸಿ
ದನು. ಅದರ ಮೇಲೆ ಅವರಿಬ್ಬರೂ ತುಂಬಾ ದಕ್ಷತೆಯಿಂದ
ಸೈನ್ಯದವರಿಗೆ ಯುದ್ಧಕ್ರಮವನ್ನು ತಿಳಿಸುತ್ತಿದ್ದರು.

ಇಷ್ಟರಲ್ಲಿ ಆಂಗ್ಲೇಯ ಸೈನ್ಯಗಳು ಕಾಲ್ಪೀನಗರದ
ನಾಲ್ಕು ಕಡೆಯಲ್ಲಿಯೂ ಸುತ್ತಿಕೊಂಡವು. ಆಗ ೨೦೦ ಕು
ದುರೆ ಬಲಗಳನ್ನು ಕೊಟ್ಟು ಯಮುನಾನದಿ ತೀರದಲ್ಲಿ ಯುದ್ಧ
ವನ್ನು ಮಾಡಲು ರಾಣಿಯನ್ನು ಕಳುಹಿಸಿ ಆಕೆಯೂ ಕಡಿಮೆ
ಸೈನ್ಯಗಳೂ ತುಂಬಾ ಜಾಗ್ರತೆಯಾಗಿರುವುದನ್ನು ಕಂಡು ತನ್ನ
ಸ್ಥಳಕ್ಕೆ ಹೋದನು. ಆದರೆ ಯುದ್ಧದಲ್ಲಿ ಅಸಮಾನ ಪ್ರ
ಜ್ಞೆಯುಳ್ಳ ಹೂಣಸೈನ್ಯಗಳು ಅಲ್ಪಕಾಲದಲ್ಲಿಯೇ ಪೇಷ್ವೆಯ
ಸೈನ್ಯವನ್ನು ದೈನ್ಯವನ್ನಾಗಿ ಮಾಡಿದವು ಅದನ್ನು ಕಂಡು
ರಾವುಸಾಹೇಬು ಪೇಷ್ವೆ ಮೊದಲಾದವರು ಅಧಿಕ ವಿಚಾರದಲ್ಲಿ
ಮುಳುಗಿರಲಾಗಿ ರಾಣಿಯು ಅವರಿಗೆ ಧೈರ್ಯವಾದ ಮಾತು
ಗಳನ್ನು ಹೇಳಿ ತನ್ನ ಸ್ವಲ್ಪ ಸೈನ್ಯದಿಂದಲೇ ಶತ್ರುಗಳನ್ನು ಬೆದ
ರಿಸಿದಳು. ಆದರೆ ಹಿಂದಿನಿಂದ ಬರುವ ಶತ್ರುಸೈನ್ಯಗಳಿಂ
ದಲೂ, ತನ್ನ ಸೈನ್ಯದಲ್ಲಿನ ಇತರ ಸೇನಾಧಿಪತಿಗಳು ಫಲಾ
ಯಿತರಾದ್ದರಿಂದಲೂ, ರಾಣಿಯು ಯುದ್ಧದಿಂದ ತೊಲಗಿ
ದಳು.

೩೧. ಹೀಗೆ ಕಾಲ್ಪಿಯಲ್ಲಿ ಅಪಜಯವನ್ನು ಹೊಂ
ದಿದ ಈ ಪ್ರಮುಖರೆಲ್ಲರೂ ಗ್ವಾಲಿಯರು ಕಡೆಯಲ್ಲಿರುವ
ಗೋಪಾಲಪುರದಲ್ಲಿ ಸೇರಿ ಮುಂದೆ ಮಾಡಬೇಕಾದ್ದನ್ನು ಕುರಿ
ತು ವಿಚಾರಿಸುತ್ತಿದ್ದರು. ಅವರು ಎಷ್ಟು ವಿಚಾರಿಸಿದರೂ ಸೈ
ನ್ಯವು ಅತ್ಯಲ್ಪವಾದ್ದರಿಂದ ಯುದ್ಧವನ್ನು ಮಾಡುವುದಕ್ಕೆ ತೋ

ಚರಿತ್ತು. ರಾಣಿಯು ಅವರ ಸಂಗಡ ಇದ್ದುದರಿಂದಲೇ ಆ ಕೆಯು ಈ ಅಲ್ಪ ಸೈನ್ಯದೊಡನೆ ಗ್ವಾಲೇರಿಗೆ ಹೋಗಿ ಸಿಂಧೇಯನ್ನು ತಮಗೆ ಜೊತೆಯಾಗಬೇಕೆಂದೂ, ಅದಕ್ಕಾತನು ಒಪ್ಪದಿದ್ದ ಪಕ್ಷದಲ್ಲಿ ಯುದ್ಧವನ್ನು ಮಾಡಬೇಕೆಂದೂ, ಆಲೋಚನೆಯನ್ನು ಹೇಳಿದಳು.

೩೯. ಆಕೆ ತಿಳಿಸಿದ ಆಲೋಚನೆಯನ್ನು ಪೇಷ್ವೆಯು ಅಂಗೀಕರಿಸಿ ದಿನದಿನ ಪ್ರಯಾಣಮಾಡಿ ೧೮೫೮ ನೇ ಸಂವತ್ಸರ ಮೇ ತಿಂಗಳು ೩೦ ನೆಯ ತಾರೀಖು ಗ್ವಾಲೇರಿಗೆ ಸಮೀಪದಲ್ಲಿರುವ ಮುರಾರಿಪುರಕ್ಕೆ ಸೇರಿದರು. ಆಗ ಅವರೆಲ್ಲರೂ ವಿಚಾರಮಾಡಿ ಸಿಂಧೇಯವರನ್ನು ತಮಗೆ ಸಹಾಯಕರಾಗುವುದಕ್ಕಾಗಿ ವರ್ತಮಾನವನ್ನು ಕಳುಹಿಸಿದರು

೪೦. ಆ ವಾರ್ತೆಯು ಸಿಂಧೇಯವರ ದರ್ಬಾರಿಗೆ ತಿಳಿಯಲಾಗಿ ಅದುವರೆಗೆ ಸ್ವಾತಂತ್ರ್ಯಪ್ರೇಮಿಯ ಬೋಧೆಯಿಂದ ಆತನಿಗೆ ವಶರಾದ ಸರದಾರರೆಲ್ಲರೂ ಪೇಷ್ವೆಗೆ ಸಹಾಯವಾಗೋಣವೆಂದು ಹೇಳಿದರು. ಆದರೆ ಪ್ರಭುಭಕ್ತಿಯುಳ್ಳ ಜಯಾಜೀರಾವ್ ಸಿಂಧೆಯವರೂ, ದಿವಾನರಾದ ದಿನಕರರಾಯರೂ, ಅವರ ವಾಕ್ಯಗಳನ್ನು ಲೆಕ್ಕಿಸದೆ ತುಂಬಾ ಯುಕ್ತಿಯಿಂದ, ಮೂರನೇದಿನ ಪೇಷ್ವೆಯ ಸೈನ್ಯಗಳನ್ನು ಹೊರಡಿಸಲು ನಿಶ್ಚಯಿಸಿದರು. ಆದರೆ ಆ ರಾತ್ರಿ ದಿವಾನರವರು ಇಲ್ಲದ ಸಮಯದಲ್ಲಿ ಯಾರೋ ಮಹಾರಾಜರನ್ನು ಯುದ್ಧಕ್ಕೆ ಉತ್ಸಾಹಿಸಿದರು. ಆಗ ಆತನು ತನಗೆ ಅಧಿಕ ವಿಶ್ವಾಸಪಾತ್ರರಾದ ಸೈನ್ಯಗಳನ್ನು ತೆಗೆದುಕೊಂಡು ಸೂರ್ಯೋದಯದವರೆಗೂ. ಮುರಾರಿಗೆ ಈಚೆಗೆ ಎರಡು ಮೈಲುಗಳ ದೂರದಲ್ಲಿದ್ದ ಬಹದುರಪುರದಲ್ಲಿ ತನ್ನ ದಂಡನ್ನು ನಿಲ್ಲಿಸಿ ಯುದ್ಧವನ್ನು ಆರಂಭಿಸಿ

ದನು. ಪ್ರಥಮದಲ್ಲಿ ಪೇಷ್ವೆಯು ಸೈನ್ಯದ ಮೇಲೆ ಬೀಳುವ ಗುಂಡುಗಳನ್ನು ಕಂಡು ಸಿಂಧೇ ಪೂರ್ವದಲ್ಲಿ ಪೇಷ್ವೆಯವರ ಬಂಟನಾದ್ದರಿಂದ ತಮಗೆ ಅನುಕೂಲನಾಗಿ ತಮ್ಮನ್ನು ಎದುರ್ಗೊಳ್ಳಲು ಬರುತ್ತಾನೆಂದು ತಿಳಿದರು. ಆದರೆ ಆ ಬಾಣವೃಷ್ಟಿಯು ಅಷ್ಟಕ್ಕೆ ಹೆಚ್ಚಿದುದರಿಂದ ಪೇಷ್ವೆ ಮೊದಲಾದ ಪುರುಷ ಶ್ರೇಷ್ಠರೆಲ್ಲರೂ ಬೆಚ್ಚಿಬಿದ್ದು ಏನೂ ತೋರದಿದ್ದರು ಆದರೆ ಅವರು ತಾನು ಹೇಳಿದ ಹಾಗೆ ಬಂದೋಬಸ್ತನ್ನು ಮಾಡದಿದ್ದರೂ, ಕೋಪಮಾಡದೆ ರಾಣಿ ಲಕ್ಷ್ಮೀಬಾಯಿಯು ತಕ್ಕ ಯುಕ್ತಿಯನ್ನು ತಿಳಿಸಿ ಯುದ್ಧಪ್ರಾರಂಭವನ್ನು ಮಾಡಿದಳು. ಆದ್ದರಿಂದ ಆ ಎರಡು ಸೈನ್ಯಗಳೂ ಸ್ವಲ್ಪಹೊತ್ತಿನವರೆಗೂ, ಸಮಾನವಾಗಿ ಹೋರಿ ಕಡೆಗೆ ಸಿಂಧೇ ಸೈನ್ಯಕ್ಕೇನೇ ಜಯವುಂಟಾಗುವ ಹಾಗಾಯಿತು ಅದನ್ನು ಕಂಡು ರಾಣಿಯು ತಾನು ಧೈರ್ಯದಿಂದ ಅಶ್ವಿಕರನ್ನು ಕರೆದುಕೊಂಡು ಸಿಂಧೇಯವರ ಫಿರಂಗಿಗಳ ಮೇಲೆ ಅಕಸ್ಮಿಕವಾಗಿ ಬಿದ್ದು ಮಹಾಘೋರವಾಗಿ ಸಿಂಧೇಸೈನಿಕರು ಓಡಲಾರಂಭಿಸಿದರು ಅದನ್ನು ಕಂಡು ತಾತ್ಯಾಟೋಪಿಯ ಸೈನಿಕರು ಮತ್ತಷ್ಟು ಉತ್ಸಾಹವುಳ್ಳವರಾಗಿ ಹೋರಲಾಗಿ ಶತ್ರುಸೈನ್ಯವನ್ನು ಕದಲಿಸುವವರಾದರು. ಆದರೆ ಸಿಂಧೇಯವರ ಪರಾಕ್ರಮವೆಲ್ಲವೂ ವ್ಯರ್ಥವಾಗಲು ಅತನೂ ದಿವಾನ್ ದಿನಕರರಾಯನೂ, ಮತ್ತೆ ಕೆಲವರು ಪರದಾರರ ಸಂಗಡ ತನಗೆ ಸಹಾಯರಾಗಬೇಕೆಂದು ಕೇಳುವುದಕ್ಕಾಗಿ ಆಗ ಕಿಲ್ಲೆಯಲ್ಲಿದ್ದ ಆಂಗ್ಲೇಯರ ಹತ್ತಿರಕ್ಕೆ ಹೋದರು. ವಿಪುಲ ಸೈನ್ಯಸಮೇತನಾದ ಒಬ್ಬ ತರುಣ ನೃಪನನ್ನು ಅಲ್ಪ ಸೈನ್ಯವುಳ್ಳ ಒಬ್ಬ ಅಬಲೆಯು ತನ್ನ ಶೌರ್ಯದಿಂದ ಹೊರಡಿಸಿದಳು. ಇದರಿಂದಲೇ ಒಬ್ಬ ಕವಿಯು ಹೀಗೆ ನುಡಿದಿರುವನು "ಕ್ರಿಯಾಸಿದ್ಧಿಃ ಸತ್ವೇಭವತಿ ಮಹತಾಂ ನೋಪ ಕರಣೇ."

೩೪. ಸಿಂಧೇಯವರು ಪುರವನ್ನು ಬಿಟ್ಟು ಹೋದ ಮೇಲೆ ಆತನ ರಾಣಿವಾಸದ ಸ್ತ್ರೀಯರುಗಳೆಲ್ಲರೂ ಆತ್ಮಸಂರಕ್ಷಣೆಗೋಸ್ಕರ ನರವರವೆಂಬ ಪುರಕ್ಕೆ ಹೋದರು.

ಇವರೆಲ್ಲರೂ ಹೊರಟು ಸ್ವಲ್ಪ ದೂರ ಹೋದಮೇಲೆ ಸಿಂಧೇ ಶತ್ರುಗಳ ಕೈಗೆ ಸಿಕ್ಕಿದನೆಂದು ಕೇಳಿ ಗಜರಾ ಎಂಬೊಬ್ಬ ಸ್ತ್ರೀಯು ಕೈಯಲ್ಲಿ ಖಡ್ಗವನ್ನು ಧರಿಸಿ ರಾಜಭವನಕ್ಕೆ ಬಂದು ರಾಜನು ಸುರಕ್ಷಿತವಾಗಿ ಹೋದ ವಾರ್ತೆಯನ್ನು ಕೇಳಿ ಆಮೇಲೆ ಹೊರಟುಹೋದಳು ಆಹಾ ! ಸ್ತ್ರೀ ಧೈರ್ಯವು ಅಸಾಮಾನ್ಯವಲ್ಲವೆ?

೩೫. ರಾಜನು ಪಲಾಯಿತನಾದ ನಂತರ ಸಕಲ ಸೈನ್ಯಗಳೂ ತಮಗೆ ಅನುಕೂಲವಾದ್ದರಿಂದ ಪೇಷ್ವೆಗೆ ನಗರವನ್ನು ಪ್ರವೇಶಿಸುವುದಕ್ಕೆ ಎಷ್ಟುಮಾತ್ರವೂ ಪ್ರಯಾಸವಾಗಲಿಲ್ಲ. ಪೇಷ್ವೆಯು ಅಷ್ಟುಮಾತ್ರಕ್ಕೆ ತಾನೇ ಸಾರ್ವಭೌಮನಾದೆನೆಂದು ತಿಳಿದು. ಪಟ್ಟಾಭಿಷೇಕ ಮಹೋತ್ಸವವನ್ನು ಮಾಡಿಸಿಕೊಂಡು ಬ್ರಾಹ್ಮಣ ಸಂತರ್ಪಣೆಯನ್ನು ಮಾಡಲಾರಂಭಿಸಿದನು. ಲಕ್ಷ್ಮೀಬಾಯಿಯು ಅದೆಲ್ಲಾ ರಾಜ್ಯನಾಶನ ಹೇತುವೆಂದೂ, ಈ ಡಂಭವನ್ನು ಬಿಟ್ಟು ಸೈನ್ಯದ ಬಂದೋಬಸ್ತನ್ನು ಚೆನ್ನಾಗಿ ಮಾಡಿ ಯುದ್ಧಸನ್ನದ್ಧನಾಗಿ ಇರತಕ್ಕದ್ದೆಂದೂ ಹೇಳಿದಳು. ಆದರೆ ಅವು ಸ್ತ್ರೀವಾಕ್ಯಗಳೆಂದು ಪೇಷ್ವೆಯೂ, ಆತನ ಸೇನಾನಾಯಕನಾದ ತಾತ್ಯಾಟೋಪಿಯೂ, ಮನ್ನಿಸದೆ ಮಹೋತ್ಸವಗಳಲ್ಲಿಯೂ, ಬ್ರಾಹ್ಮಣ ಸಂತರ್ಪಣೆಗಳಲ್ಲಿಯೂ ಮುಳುಗಿದ್ದರು.

೩೬. ಜೂನ್ ತಿಂಗಳು ೧೬ ನೇ ತಾರೀಖು ಸರ್ ಹ್ಯೂರೋಜರವರು ಸೈನ್ಯ ಸಹಿತರಾಗಿ ಬಹದ್ದೂರು ಪುರವನ್ನು

ಸೇರಿದರು. ಆದರೆ ಭೋಗವಿಲಾಸಪರಾಯಣನಾದ ಪೇಷ್ವೆಗೆ ಆ ಸಂಗತಿಯೇ ತಿಳಿಯದೆ ಇತ್ತು. ಆಂಗ್ಲೇಯ ಸೇನಾ ನಾಯಕರು ಅಲ್ಲಿಂದ ಮೂರಾರು ಕೋಟೆಯನ್ನು ಹಿಡಿದ ರೆಂದು ಕೇಳಿದರೂ, ಪೇಷ್ವೆಯು ಆ ಚಿಂತೆಯನ್ನು ಬಿಟ್ಟು ಪುಣ್ಯ ಕೃತ್ಯವನ್ನೇ ಮಾಡುತ್ತಿದ್ದನು. ಆತನ ಆಜ್ಞೆ ಪಡೆದು ತಾತ್ಯಾ ಟೋಪಿಯು ಸೈನ್ಯ ವ್ಯವಸ್ಥೆಯನ್ನು ಮಾಡುವ ರೀತಿ ಯನ್ನು ಕಾಣದೆ ಲಕ್ಷ್ಮೀಬಾಯಿಯನ್ನು ಬೇಡಿಕೊಂಡನು. ಜಯ ಉಂಟಾಗುವದೆಂಬ ಆಶೆ ಇಲ್ಲವೆಂದು ತಿಳಿದುಕೊಂಡಿ ದ್ದರೂ, ರಾಣಿಯು ಸಮರಕ್ಕೆ ಹೋಗಿ ಸ್ವರ್ಗವನ್ನು ಹೊಂದ ಲಪೇಕ್ಷಿಸಿ ಆತನ ಅಪ್ಪಣೆಯನ್ನು ಚಿತ್ತವಿಸಿದಳು. ತದ ನಂತರ ಆಕೆ ಸ್ವಲ್ಪ ಸೈನ್ಯವನ್ನು ಸರಿಪಡಿಸಿ ಉಳಿದ ಇತರ ಸೇನಾನಾಯಕರನ್ನು ನೋಡಿಕೊಳ್ಳಲು ನಿಯಮಿಸಿದಳು. ಆಕೆ ಯು ತನ್ನ ಸೇನೆಯನ್ನು ಅನೇಕ ಭಾಗಗಳನ್ನಾಗಿ ಭಾಗಿಸಿ ತುಂಬಾ ಭದ್ರವಾಗಿ ಯುದ್ಧ ಸನ್ನದ್ಧಳಾಗಿ ನಿಂತಳು. ಇತರ ಸೈನ್ಯಾಧಿಪತಿಗಳೂ, ತಮ್ಮತಮ್ಮ ಶಕ್ತ್ಯಾನುಸಾರವಾಗಿ ಯು ದ್ಧಸನ್ನದ್ಧರಾಗಿ ನಿಂತುಕೊಂಡರು. ರಾಣಿಯು ಗ್ವಾಲೇರು ಪೂರ್ವದಿಕ್ಕನ್ನು ರಕ್ಷಿಸುತ್ತೇನೆಂದು ತನ್ನ ಸೈನ್ಯವನು ಅಲ್ಲಿಯೇ ಬಂದೋಬಸ್ತನ್ನು ಮಾಡಿ ನಿಂತಳು.

೨೭. ೧೭ ನೇ ತಾರೀಖು ಬ್ರಿಗೇಡಿಯರ್ ಸ್ಮಿತ್ ಎಂಬ ಸೈನ್ಯಾಧಿಪತಿಯು ಗ್ವಾಲೇರು ಪೂರ್ವದಿಕ್ಕಿನಲ್ಲಿದ್ದ ಸೈನ್ಯದ ಮೇಲೆ ಬಾಣ ವೃಷ್ಟಿಯನ್ನು ಸುರಿಸಲಾರಂಭಿಸಿ ದನು. ಅದು ರಾಣಿಯ ಬಲವಾದ್ದರಿಂದ ಆ ಸೈನಿಕರು ಇಂಗ್ಲಿಷಿನವರ ಬಲವನ್ನು ಅದಿನ ಧೈರ್ಯದಿಂದ ಎದುರಿಸಿ ನಿಂತರು. ಎರಡನೆಯ ದಿನವೂ ಲಕ್ಷ್ಮೀಬಾಯಿಯು ವೀರೋ

ತ್ಸಾಹದಿಂದ ಆ ಸೈನ್ಯಗಳು ಪರಬಲಗಳನ್ನು ಹೊಡೆದು ತಾವೂ ಮೃತವಾಗುತ್ತಾ ಇದ್ದವ. ಲಕ್ಷ್ಮೀಬಾಯಿಯ ಶೌರ್ಯ ವನ್ನು ಕಂಡು ಆಂಗ್ಲೇಯ ಸೇನಾನಾಯಕರು ತುಂಬಾ ಅದ್ಭು ತಪಟ್ಟು ಆಕೆಯನ್ನು ಹಿಡಿಸಲು ನಿಶ್ಚಯಿಸಿದರು. ಹೀಗೆ ಅವರು ನಿಶ್ಚಯಿಸಿ ನಾಲ್ಕು ದಿಕ್ಕಿನಿಂದಲೂ ಆಕೆಯ ಸೈನ್ಯದ ಮೇಲೆ ಬಾಣ ವರ್ಷವನ್ನು ಸುರಿಸಲಾಗಿ ಆ ಸೈನ್ಯಗಳು ನಿಲ್ಲದೆ ಓಡಲಾರಂಭಿಸಿದವು. ಹೀಗೆ ತನ್ನ ಮುಖ್ಯ ಸೇವಕರು ಕೆಲವರು ವಿನಃ ಎಲ್ಲರೂ ತನ್ನನ್ನು ಬಿಟ್ಟು ಹೋದದ್ದರಿಂದಲೂ ಅದಕ್ಕೆ ಮುಂಚೆಯೇ ಇತರ ಸೇನಾಧಿಪತಿಗಳು ಅಪಜಯ ವನ್ನು ಪೊಂದಿ ಪಲಾಯಿತರಾದ್ದರಿಂದಲೂ, ಲಕ್ಷ್ಮೀಬಾ ಯಿಯು ತನ್ನ ಖಡ್ಗದಿಂದ ಶತ್ರು ಸೈನ್ಯದಲ್ಲಿ ಅನೇಕ ಶೂರ ರನ್ನು ಕತ್ತರಿಸುತ್ತ ಹೋಗುತಿದ್ದಳು ಹೀಗೆ ಆಕೆ ಬಹಳ ದೂರ ಹೋದ ಮೇಲೆ ಆಕೆಯ ಸಂಗಡ ಪುರುಷವೇಷವನ್ನು ಧರಿಸಿದ್ದ "ಮುಂದರಿ" ಎಂಬ ದಾಸಿಯ ಅಂತ್ಯಶಬ್ದವು ಆಕೆಯ ಕಿವಿಗೆ ಬಿತ್ತು. ಅದರಿಂದ ಆಕೆ ಹಿಂದಕ್ಕೆ ತಿರುಗಿ ತನ್ನ ಪ್ರಿಯ ದಾಸಿಯನ್ನು ಕೊಂದವರನ್ನು ಯಮಪುರಕ್ಕೆ ಕಳುಹಿಸಿ ಮುಂದಕ್ಕೆ ಹೊರಟಳು. ಹೀಗೆ ಮುಂದಕ್ಕೆ ಅತಿ ತ್ವರೆಯಾಗಿ ಹೋಗುತ್ತಿರಲಾಗಿ ಒಂದು ಜಲ ಪ್ರವಾಹವು ಅಡ್ಡ ಬಂದದ್ದರಿಂದ ಅನೇಕ ಗಾಯಗಳಿಂದ ಕ್ಷೀಣಿಸಿದ್ದ ಆಕೆಯ ಕುದುರೆಯು ಆ ಪ್ರವಾಹವನ್ನು ದಾಟಲಾರದೆ ನಿಂತಿ ತು? ಲಕ್ಷ್ಮೀಬಾಯಿಯು ಆ ಕುದುರೆಯನ್ನು ಆ ಕಡೆಗೆ ತೆಗದುಕೊಂಡು ಹೋಗಲು ಪ್ರಯತ್ನಪಟ್ಟರೂ, ಆ ಕೆಲಸವು ಸಿದ್ಧಿಸದೆ ಹೋಯಿತು. ಇಷ್ಟರಲ್ಲಿ ಶತ್ರು ಸೈನ್ಯದವರು ಕೆಲವರು ಆಕೆಯನ್ನು ಸೇರಬರಲು ಆ ಯುವತಿಯು

ತುಂಬಾ ಶೌರ್ಯದಿಂದ ಅವರಲ್ಲನೇಕರನ್ನು ಅಂತಕಪುರಕ್ಕೆ ಕಳುಹಿಸಿದಳು. ಅವರು ಬಹಳ ಜನರು, ಈಕೆ ಒಬ್ಬಳೇ ಆದ್ದರಿಂದ ಅವರಲ್ಲೊಬ್ಬನು ಆಕೆಯ ಹೊಡತಕ್ಕೆ ಹೆದರದೆ ಪಕ್ಕದಲ್ಲಿ ನಿಂತು, ಆಕೆಯ ಬಲಗಡೆಗೆ ಹೊಡೆದನು. ಬಂಧಿಸಲ್ಪಟ್ಟ ಸಿಂಹದ ಮೇಲೆ ಮತ್ತಗಜವು ಆಡುವ ಹಾಗೆ ಆಭಟನು ಹಾಕಿದ ಖಡ್ಗ ಪ್ರಹಾರದಿಂದ ಆಕೆಯ ತಲೆಯ ಬಲಭಾಗವೆಲ್ಲವೂ ಘಾಯವಾಗಿ ರಕ್ತವು ಸ್ರವಹಿಸಿತು. ಇಷ್ಟರಲ್ಲಿ ಆ ಅಶ್ವಿಕನು ತನ್ನ ಖಡ್ಗವನ್ನು ಆ ರಾಣಿಯ ಬೆನ್ನಿನ ಮೇಲೆ ಚುಚ್ಚಿದನು. ಪುರುಷವೇಷದಿಂದಿದ್ದದ್ದರಿಂದ ಈಕೆಯು ರಾಣಿಯೆಂದು ಹಗೆಗಳಿಗೆ ತಿಳಿಯಲಿಲ್ಲವಾದರೂ, ಶತ್ರು ಸೈನ್ಯದಲ್ಲಿ ಒಬ್ಬಾನೊಬ್ಬ ಸೈನ್ಯಾಧಿಪತಿಯೆಂದು ಅವರಿಗೆ ತೋರಿತು ಈ ದೆಬ್ಬೆಯಿಂದ ರಾಣಿಯು ಮೂರ್ಛೆಯನ್ನು ಹೊಂದಿದಳು. ಆದರೆ ಆ ವೀರ ಯುವತಿಯು ಅಂಥ ಸಮಯದಲ್ಲಿಯೂ ಧೈರ್ಯವನ್ನು ಬಿಡದೆ ತನ್ನನ್ನು ಅಂಥಸ್ಥಿತಿಗೆ ತಂದ ಆ ಅಶ್ವಿಕನನ್ನು ಪರಲೋಕಕ್ಕೆ ಕಳುಹಿಸಿದಳು.

೨೮ ಹೀಗೆ ಆಕೆ ಅವನನ್ನು ಕೊಂದು ಬಹಳವಾಗಿ ಶಕ್ತಿಹೀನಳಾದಳು. ಅದುವರೆಗೂ ಆಕೆಯನ್ನು ಬಿಡದಿದ್ದ ರಾಮಚಂದ್ರರಾವು ದೇಶಮುಖನು ಬಂದು ಪಕ್ಕದ ಮುಖದಲ್ಲಿ ಹೊಡೆಯಲ್ಪಟ್ಟ ರಾಣಿಯನ್ನು ಶತ್ರುಗಳ ಕೈಗೆ ಬೀಳದಂತೆ ಸಮೀಪದಲ್ಲಿದ್ದ ಪರ್ಣಕುಟಿಯೊಳಕ್ಕೆ ತೆಗೆದುಕೊಂಡು ಹೋದನು. ಆತನು ತುಂಬಾ ದುಃಖಿಸಿ ರಾಣಿಗೆ ಉಪಚಾರವನ್ನು ಮಾಡುತಿದ್ದನು. ಆದರೆ ೧೮೫೮ ನೇ ಸಂವತ್ಸರದ ಜೂನ್ ತಿಂಗಳು ೧೮ ನೇ ತಾರೀಖಿನ ದಿನ ಆ ಅದ್ವಿತೀಯ ಶೌರ್ಯಗಣಮಂಡಿತೆಯಾದ ಝಾನ್ಸೀ ಮಹಾರಾಣೀ ಲಕ್ಷ್ಮೀ

ಬಾಯಿಯು ಈ ಲೋಕವನ್ನು ಬಿಟ್ಟು. ಶಾಶ್ವತ ಸುಖ ಪ್ರದ
ವಾದ ಲೋಕಕ್ಕೆ ಹೋದಳು.

ರಾಮಚಂದ್ರರಾವ ದೇಶಮುಖರಾಯನು, ರಾಣಿಯ
ಅಜ್ಞೆಯ ಪ್ರಕಾರ ಆಕೆಯ ಶರೀರವು ಶತ್ರುಗಳ ಕೈಲಿ ಬೀಳ
ದಂತೆ ಗುಪ್ತವಾಗಿ ಅಗ್ನಿ ಸಂಸ್ಕಾರವನ್ನು ಮಾಡಿದನು.

೩೯. ಆ ಮೇಲೆ ಆ ಯುದ್ಧದಲ್ಲಿ ಜಯವನ್ನು ಹೊಂದಿ
ಆಂಗ್ಲೇಯ ಸೇನಾಧಿಪತಿಗಳು, ಸಿಂಧೇಯವರಿಗೆ ಪುನಃ ರಾಜ್ಯ
ವನ್ನು ಕೊಟ್ಟರು. ತದನಂತರ ಆ ಸೇನಾನಾಯಕರು ಕ್ರಮ
ವಾಗಿ ಬಂದಿಪೋಟದವರನ್ನು ಅಡಗಿಸಿ ತಾತ್ಯಾಟೋಪಿ
ಯನ್ನೂ ಇತರ ಸೇನಾಧಿ ಪತಿಗಳನ್ನೂ, ಉರುಲು ಹಾಕಿಸಿ
ದರು. ಬಂದೇವಾಲಾ ನವಾಬನು ಶರಣು ಹೊಂದಿ ಕ್ಷಮೆಗೆ
ಪಾತ್ರನಾದನು.

೪೦. ಇಂಗ್ಲೀಷುಪ್ರಭುಗಳು ಹೀಗೆ ವಿಜಯರಾದ್ದರಿಂದ
ಅದೃಷ್ಟವಶಾತ್ ನಮಗೆ ಸ್ತ್ರೀವಿದ್ಯಾಧಿಕ್ಯದಿಂದ ಅತ್ಯಂತ ಲಾಭ
ಪ್ರದವಾದ ಉತ್ತಮ ವಿಕ್ಟೋರಿಯಾ ಮಹಾರಾಜ್ಞಿಯವರ ಪ್ರ
ಭುತ್ವವು ಪ್ರಾಪ್ತವಾಯಿತು.

೪೧. ರಾಣಿ ಲಕ್ಷ್ಮೀಬಾಯಿಯ ದತ್ತುಪುತ್ರನು ತಾ
ಯಿಯ ಅನಂತರ ಅನೇಕ ಕಷ್ಟಗಳನ್ನು ಅನುಭವಿಸಿ ಈಗ
ತಿಂಗಳಿಗೆ ೬೦ ರೂಪಾಯಿಗಳ ಜೀವನವನ್ನು ಪಡೆದು ಸಾಮಾ
ನ್ಯಮಾನವನ ಹಾಗೆ ಇಂದೋರು ಪಟ್ಟಣದಲ್ಲಿ ಕಾಲವನ್ನು
ಕಳೆಯುವವನಾದನು

೪೦. ಲಕ್ಷ್ಮೀಬಾಯಿಯು ಇಂಗ್ಲೀಷಿನವರ ಸಂಗಡ
ಹೋರಾಡಿದ್ದರಿಂದ ಅನೇಕ ಆಂಗ್ಲೇಯರು ಆಕೆಯ ಶೌರ್ಯಾ
ದಿಗಳನ್ನು ಅನೇಕರೀತಿಯಲ್ಲಿ ಕೊಂಡಾಡಿದ್ದಾರೆ. ಅವರಲ್ಲಿ
ಕೆಲವು ಮಾತ್ರ ಇಲ್ಲಿ ಉದಾಹರಿಸಲ್ಪಡುವವು.

೧. ಮಹಾರಾಣಿ ಲಕ್ಷ್ಮೀಬಾಯಿಯನ್ನೆದುರಿಸಿ ನಿಂತು ಕಾದಿ ಜಯಿಸಿದ ಸರ್. ಹ್ಯೂರಾಸ್ ಬರೆದಿರುವುದೇನೆಂದರೆ—ರಾಣಿ ಲಕ್ಷ್ಮೀಬಾಯಿಯು ಪರಿಶುದ್ಧ ಚರಿತ್ರಳು. ಆಕೆ ತನ್ನ ಆಶ್ರಿತರಲ್ಲಿಯೂ ಸೈನಿಕರಲ್ಲಿಯೂ ತುಂಬಾ ಔದಾರ್ಯಗುಣವುಳ್ಳವಳಾಗಿದ್ದಳು ದೊಡ್ಡದೊಡ್ಡ ವಿಪತ್ಕಾಲಗಳಲ್ಲಿ ಕೂಡ ನಿಶ್ಚಲವಾದ ಧೈರ್ಯದಿಂದ ಇದ್ದಳು. ಇದರಿಂದ ಸೈನಿಕರಿಗೆ ಆ ರಾಣಿಯಲ್ಲಿ ಪೂಜ್ಯಭಾವವಿದ್ದಿತು. ಇದನ್ನು ನೋಡಿ ಆಕೆಯನ್ನು ಕಂಡರೆ ನಮಗೆ ಭಯವಾಗುತ್ತಿತ್ತು. ಆಕೆಯು ಹೆಂಗಸಾಗಿದ್ದರೂ ನಮ್ಮನ್ನು ಎದುರಿಸಿ ಕಾದಿದವರಲ್ಲ ಅತಿ ಶೂರಳೂ ಘನವಾದ ಸೇನಾಧ್ಯಕ್ಷಳೂ ಆಗಿದ್ದಳು.

೨ ಡಾಕ್ಟರ್ ಲೋ ಎಂಬವರು ಬರೆದದ್ದು—"ಯುದ್ಧದಲ್ಲಿ ಬಹು ದೃಢನಿಶ್ಚಯವುಳ್ಳವಳೂ ಜನಾನುರಾಗವನ್ನು ಪಡೆದಿದ್ದವಳೂ ಉತ್ತಮ ತೇಜಸ್ವಿನಿಯೂ ಶಕ್ತಳಾದ ಸೇನಾಧ್ಯಕ್ಷಳೂ ಆಗಿದ್ದ ಝಾನ್ಸೀರಾಣಿ ಲಕ್ಷ್ಮೀಬಾಯಿಯು ಕೊಲ್ಲಲ್ಪಟ್ಟಳು."

೩. ಲಾರ್ಡ್ ಮಾರ್ಟಿನ್—ಲಕ್ಷ್ಮೀಬಾಯಿಯು ಇನ್ನೂ ಯೌವನಾವಸ್ಥೆಯಲ್ಲಿ ಇದ್ದುದರಿಂದ ಬಹು ಸುಂದರಾಂಗಿಯಾಗಿಯೇ ಇದ್ದಳು. ಅವಳಿಗೆ ತನ್ನ ಪ್ರಾಣ ಹೋಗುವುದೆಂಬ ಭಯವೇ ಇರಲಿಲ್ಲ. ಆದರೆ ಮಾನಭಂಗವಾದೀತೇನೋ ಎಂಬ ಹೆದರಿಕೆ ಮಾತ್ರವಿತ್ತು. ಅವಳ ಮನಸ್ಸು ಉತ್ಸಾಹಶೀಲವಾಗಿದ್ದುದರಿಂದಲೂ ಶರೀರವು ಸದೃಢವಾಗಿದ್ದುದರಿಂದಲೂ ಆಕೆಯೊಂದಿಗೆ ಹೋಗುವುದಕ್ಕೆ ಭಟರು ಹೆದರುತ್ತಿದ್ದರು.

೪. ಎಡ್ವಿನ್ ಆರ್ನೋಲ್ಡ್—ರಾಜ್ಯ ತಂತ್ರಗಳನ್ನು ನಡಿಸಲು ಶಕ್ತಿಸಾಲದವಳೆಂದು ಭಾವಿಸಿ ಯಾವ ಸ್ತ್ರೀಯನ್ನು ನಾವು ರಾಜ್ಯಪದ ಭ್ರಷ್ಟಳನ್ನಾಗಿ ಮಾಡಿದೆವೊ, ಅಂತಹ ಸ್ತ್ರೀಯೇ ಪ್ರಚಂಡ ಸೇನಾಧ್ಯಕ್ಷತೆ ವಹಿಸಲು ಪೂರ್ಣ ಸಮರ್ಥಳೆಂದು ನಮಗೆ ಕೊನೆಕೊನೆಗೆ ಚೆನ್ನಾಗಿ ದೃಢವಾಯಿತು.

೫. ಜಸ್ಟಿಸ್ ಮ್ಯಾಕರ್ತಿ—"ನಮ್ಮ ಶತ್ರುವರ್ಗದಲ್ಲಿ ಝಾನ್ಸಿ ಮಹಾರಾಣಿ ಲಕ್ಷ್ಮೀಬಾಯಿಯೊಬ್ಬಳೇ ಅತ್ಯುತ್ತಮವಾದ ಬುದ್ಧಿಯುಳ್ಳವಳು. ಅವಳ ಸಮಾನ ಬುದ್ಧಿಯುಳ್ಳವರು ಯಾರೂ ಇಲ್ಲ."



# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೪ | ೧೨ | ಹೋಗಿರಿ | ಹೋಗಿರಿ” |
| ೫ | ೧೩ | ಮನೊರಥ | ಮನೋರಥ |
| ೭ | ೨೦ | ತ್ರಿಪುರಮರ್ದಿನೆ | ತ್ರಿಪುರಮರ್ದನಿ |
| ,, | ೨೨ | ಹೆಜ್ಜಿಯು | ಹೆಜ್ಜೆ |
| ೧೧ | ೭ | ತೊರುವುದಿಲ್ಲ | ತೋರುವದಿಲ್ಲ |
| ೧೨ | ೧೮ | ಅರ್ಪಿಸು | ಅರ್ಪಿಸು |
| ೧೩ | ೧೦ | ನವಗೆ | ನಮಗೆ |
| ,, | ೧೭ | ಯೋಚಿಸಿದ್ದಿರೋ | ಯೋಚಿಸಿದ್ದೀರೋ |
| ೧೫ | ೩ | ಮಾಡಿತೆಂದೂ | ಮಾಡಿರೆಂದೂ |
| ,, | ೪ | ಡಬೇಕೆ | (ಇದನ್ನು ಬಿಟ್ಟುಬಿಡಿ) |
| ೧೬ | ೧೫ | ಅಷ್ಟರಲ್ಲಿ | ಅಷ್ಟರಲ್ಲಿ |
| ೧೭ | ೧೫ | ವೃತ್ಯು | ಮೃತ್ಯು |
| ೧೭ | ೨೧ | ನೊಬ್ಬನಿಗೊಬ್ಬನಿಗೂ | ನೊಬ್ಬನಿಗೂ |
| ೨೦ | ೯ | ಕರೋರ | ಕಠೋರ |
| ೨೪ | ೧೭ | ತಿಳಿದನು | ತಿಳಿಸಿದನು |
| ೨೬ | ೪ | ಕಳುಹಿಸಿದರು | ಕಳುಹಿಸಿದನು |
| ೩೦ | ೧೬ | ನಾಶವಾಗುವದಕ್ಕೆ | ನಾಶವಾಗದಕ್ಕೆ |
| ೩೩ | ೧೬ | ಕೃಷಾಕುಮಾರಿ | ಕೃಷ್ಣಾಕುಮಾರಿ |
| ೩೪ | ೧ | ಕನೆ.ಯನ್ನು | ಕನ್ಯೆಯನ್ನು |
| ,, | ೨ | ಕಾಲರ್ಮ | ಕಾಲಧರ್ಮ |

| ಪುಟ | ಪಂಕ್ತಿ | ಅಶುದ್ದ | ಶುದ್ಧ |
|---|---|---|---|
| ೩೮ | ೯ | ವಿಷಯವ | ವಿಷವ |
| ೩೯ | ೯ | ಮರವನ್ನು | ಮರವನ್ನಾಗಿ |
| ೪೧ | ೨ | ತಂದೆಯರವ | ತಂದೆಯವರ |
| ೪೬ | ೭ | ಆಓಡಿಸಿ ತನ | ಓಡಿಸಿ ತನ್ನ ಆ |
| ೪೭ | ೨ | ಸ್ನಾವನ್ನು | ಸ್ನಾನವನ್ನು |
| ೪೮ | ೨೧ | ಬಿರುದಗರುಳ್ಳ | ಬಿರುದುಗಳುಳ್ಳ |
| ೫೯ | ೩ | ಕೃಷರಾವು | ಕೃಷ್ಣರಾವು |
| ೬೨ | ೯ | ಗುಣಗುಣ | ಗುಣ |
| ೬೪ | ೨೨ | ವಹಿಸಲು | ವಹಿಸು |
| ೬೭ | ೧ | ನನಗ | ನಗ |
| ೭೧ | ೨೨ | ಕೊಡುವೆನೆಂದು | ಕೊಡು" ಎಂದು |
| ೭೨ | ೨೦ | ಕಾಶಲ | ಕೌಶಲ |
| ೭೩ | ೧ | ಗಳ್ನು | ಗಳನ್ನು |
| ೭೫ | ೧೯ | ರಾಪ್ಪುಯು | ರಾಣಿಯು |
| ,, | ೨೧ | ಅಳೇಕ | ಅನೇಕ |
| ೭೯ | ೨೨ | ನಗರರಲ್ಲಿ | ನಗರದಲ್ಲಿ |
| ೮೦ | ೮ | ಚೌರ್ಯ | ಶೌರ್ಯ |

ವಿ. ಸೂ.—ಇಲ್ಲಿ ಅರ್ಥವ್ಯತ್ಯಾಸವಾಗುವ ತಪ್ಪುಗಳನ್ನು ಮಾತ್ರ ತಿದ್ದಿದೆ. ಅಚ್ಚಿನ ಸ್ಖಲಿತಗಳೇನಾದರೂ ಇದ್ದು ವಾಚಕರು ಸರಿಪಡಿಸಿ ಕೊಟ್ಟಲ್ಲಿ ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುತ್ತೆ.

